# ಜನಸಂಖ್ಯಾ ಶಿಕ್ಷಣ

ಮಾಲಿಕೆ- 1

## ಜನಸಂಖ್ಯಾ ಶಾಸ್ತ್ರದ ಪರಿಕಲ್ಪನೆಗಳು




ರಾಜ್ಯ ಶಿಕ್ಷಣ ಸಂಶೋಧನೆ
ಮತ್ತು ತರಬೇತಿ ಇಲಾಖೆ
ಬೆಂಗಳೂರು-4

ನಮಗಾಗಿ ಜನಸಂಖ್ಯಾ ಶಿಕ್ಷಣ




ಮಾಲಿಕೆ - ೧

# ಜನಸಂಖ್ಯಾ ಶಾಸ್ತ್ರದ ಪರಿಕಲ್ಪನೆಗಳು

ಲೇಖಕರು

**ಡಾ : ಕೆ. ಎಸ್. ಬೈಲಕೇರಿ**

ಸಾಮಾನ್ಯ ಸಂಪಾದಕರು :

**ಡಾ|| ಜಿ. ಎಂ. ಪಟ್ಟೇದ**

ರಾಜ್ಯ ಜನಸಂಖ್ಯಾ ಶಿಕ್ಷಣ ಕೇಂದ್ರ

(ಭಾರತ ಜನಸಂಖ್ಯಾ ಯೋಜನೆ-III)

**ರಾಜ್ಯ ಶಿಕ್ಷಣ ಸಂಶೋಧನೆ ಹಾಗೂ ತರಬೇತಿ ಇಲಾಖೆ**

**ಬಿ. ಪಿ. ವಾಡಿಯಾ ರಸ್ತೆ, ಬೆಂಗಳೂರು-೫೬೦ ೦೦೪.**

ಮುದ್ರಣ :
ಫೆಬ್ರವರಿ ೧೯೮೭
೩೦,೦೦೦ ಪ್ರತಿಗಳು

ಮುದ್ರಣದ ಹಕ್ಕು ಹಾಗೂ ಪ್ರಕಾಶನ :
**ನಿರ್ದೇಶಕರು**
**(ಸಂಶೋಧನೆ ಮತ್ತು ತರಬೇತಿ)**
ಬಿ. ಪಿ. ವಾಡಿಯಾ ರಸ್ತೆ
ಬೆಂಗಳೂರು-೫೬೦ ೦೦೪

ರಕ್ಷಾಪುಟದ ವಿನ್ಯಾಸ :
**ಶ್ರೀ ಕೆ. ಕೆ. ಮುಳಾಳಿ**

ಇತರ ಚಿತ್ರಗಳು :
**ಶ್ರೀ ಎಸ್. ಸಿ. ಕಮತದ**



ಮುದ್ರಕರು :
**ನೀತಿ ಪ್ರಿಂಟಿಂಗ್ ಪ್ರೆಸ್**
ನಂ. ೮, ೯ನೇ ಅಡ್ಡ ರಸ್ತೆ
ವಿನಾಯಕನಗರ, ಆಡುಗೋಡಿ
ಬೆಂಗಳೂರು-೫೬೦ ೦೩೦

**ಅ. ರಾಮಕೃಷ್ಣರಾವ್**
ನಿರ್ದೇಶಕರು (ಸಂಶೋಧನೆ ಮತ್ತು ತರಬೇತಿ)
ಬಿ.ಪಿ. ವಾಡಿಯಾ ರಸ್ತೆ, ಬೆಂಗಳೂರು-4

# ಮೊದಲ ನುಡಿ

ಇಂದು ಜಗತ್ತಿನ ಬಹುತೇಕ ರಾಷ್ಟ್ರಗಳು ಅನೇಕ ಸಮಸ್ಯೆಗಳ ಸಂಕೋಲೆಯಲ್ಲಿ ಸಿಲುಕಿದೆ, ಒಂದು ಗುಂಪಿನ ರಾಷ್ಟ್ರಗಳು ತಮ್ಮ ಶಕ್ತಿ ಪ್ರದರ್ಶನಕ್ಕಾಗಿ ಮಾರಕಾಸ್ತ್ರಗಳನ್ನು ತಯಾರಿಸುತ್ತಿದ್ದಾರೆ, ಇನ್ನೊಂದು ಗುಂಪಿನ ರಾಷ್ಟ್ರಗಳು ತಮ್ಮ ಪ್ರಜೆಗಳ ದಿನ ನಿತ್ಯದ ಆವಶ್ಯಕತೆಗಳ ಪೂರೈಕೆಗಾಗಿ ಹೆಣಗಾಡುತ್ತಿವೆ. ಎರಡನೆಯ ಗುಂಪಿನ ರಾಷ್ಟ್ರಗಳ ಪಟ್ಟಿಯಲ್ಲಿ ಭಾರತ ಮುಂಚೂಣಿಯಲ್ಲಿದೆ ಎಂದರೆ ತಪ್ಪಾಗಲಾರದು.

ಆರು ಪಂಚವಾರ್ಷಿಕ ಯೋಜನೆಗಳು ಮುಗಿದಿದ್ದರೂ ನಿರೀಕ್ಷಿತ ಪ್ರಗತಿ ಕಾಣುತ್ತಿಲ್ಲ. ಇದಕ್ಕೆ ಪ್ರಮುಖ ಕಾರಣ ಹೆಚ್ಚುತ್ತಿರುವ ಜನಸಂಖ್ಯೆ ಪ್ರಗತಿ ಪಥದಲ್ಲಿ ಮುನ್ನಡೆಯು-ತ್ತಿರುವ ಭಾರತದ ಸಂಪತ್ತೆಲ್ಲವನ್ನೂ ಕಬಳಿಸುತ್ತಿದೆ ಏರುತ್ತಿರುವ ಜನಸಂಖ್ಯೆ ಜನಸಂಖ್ಯಾ ಸಮಸ್ಯೆಯು ಎಲ್ಲಾ ಹಂತದಲ್ಲಿರುವ ಎಲ್ಲಾ ಜನರನ್ನು ವೈಯುಕ್ತಿಕ, ಕೌಟುಂಬಿಕ, ಸಾಮಾಜಿಕ ಶೈಕ್ಷಣಿಕ ಹಾಗೂ ರಾಜಕೀಯವಾಗಿ ಬಾಧಿಸುತ್ತಿದೆ ಎಂದರೆ ಅತಿಶಯೋಕ್ತಿ ಆಗಲಾರದು.

ಭಾರತದ ಪ್ರಜೆ ತನ್ನ ಮೂಲ ಭೂತ ಹಕ್ಕುಗಳನ್ನು ಹೊಂದಿರುವಂತೆಯೇ ತನ್ನ ಕರ್ತವ್ಯಗಳನ್ನೂ ನಿರ್ವಹಿಸಲೇಬೇಕು. ದೇಶದ ಸುಸ್ಥಿತಿಯನ್ನು ಗಮನದಲ್ಲಿರಿಸಿ ಚಿಕ್ಕ ಕುಟುಂಬವನ್ನು ಹೊಂದಲು ನಿರ್ಧಾರ ಮಾಡಬೇಕು. ಈ ದಿಶೆಯಲ್ಲಿ ಮೂರನೆಯ ಭಾರತ ಜನಸಂಖ್ಯಾ ಯೋಜನೆಯು ಕರ್ನಾಟಕದ ಆರು ಜಿಲ್ಲೆಗಳಲ್ಲಿ ಅನುಷ್ಠಾನದಲ್ಲಿದೆ ಕ್ಷೇತ್ರ ಕಾರ್ಯಕರ್ತರ ತರಬೇತಿಯನ್ನು ಜಿಲ್ಲಾ ಜನಸಂಖ್ಯಾ ಶಿಕ್ಷಣಾ ಕೇಂದ್ರಗಳು ಕೈಗೊಂಡಿದ್ದು ಅವರ ಬಳಕೆಗಾಗಿ ಕೆಲವು ಪುಸ್ತಿಕೆಗಳನ್ನು ರಾಜ್ಯ ಜನಸಂಖ್ಯಾ ಶಿಕ್ಷಣ ಕೇಂದ್ರವು ಪ್ರಕಟಿಸಿದೆ. ಧಾರವಾಡದ ಪ್ರಾದೇಶಿಕ ಜನಸಂಖ್ಯಾ ಶಿಕ್ಷಣ ಕೇಂದ್ರವು ಈ ಪುಸ್ತಿಕೆಗಳನ್ನು ತಯಾರಿಸಿದ್ದು ಇವು ಕಾರ್ಯಕರ್ತರಿಗೆ ತುಂಬಾ ಉಪಯುಕ್ತವಾಗಿವೆ.

ಆ ಪುಸ್ತಿಕೆಗಳನ್ನು ರಚಿಸಿದ ತಜ್ಞರಿಗೂ ಹಾಗೂ ಇವುಗಳ ತಯಾರಿಕೆಯಲ್ಲಿ ಶ್ರಮಿಸಿದ ವಿವಿಧ ಅಧಿಕಾರಿಗಳಲ್ಲಿ ಕೃತಜ್ಞತೆಗಳು. ಕಡಿಮೆ ಅವಧಿಯಲ್ಲಿ ಮುದ್ರಣ ಕಾರ್ಯ-ವನ್ನು ಕೈಗೊಂಡ ಮುದ್ರಣಾಲಯದವರು ಉತ್ತಮ ಕಾರ್ಯಮಾಡಿದ್ದಾರೆ. ಈ ಪುಸ್ತಿಕೆಗಳ ಉಪಯುಕ್ತತೆಯ ಬಗ್ಗೆ ಸಲಹೆಗಳನ್ನು ಜನಸಂಖ್ಯಾ ಶಿಕ್ಷಣ ಕೇಂದ್ರವು ಸ್ವಾಗತಿ-ಸುತ್ತದೆ.

**ಅ. ರಾಮಕೃಷ್ಣರಾವ್**

# ರಾಜ್ಯ ಜನಸಂಖ್ಯಾ ಶಿಕ್ಷಣ ಕೇಂದ್ರ

ಬೆಂಗಳೂರು-೫೬೦ ೦೦೪

## ಅಧಿಕಾರಿ ವರ್ಗ

| | | |
|---|---|---|
| ನಿರ್ದೇಶಕರು | : | **ಶ್ರೀ ಅ. ರಾಮಕೃಷ್ಣರಾವ್** |
| ಸಂಯೋಜನಾಧಿಕಾರಿಗಳು | : | **ಶ್ರೀ ಎ. ಎ. ಪೂವಯ್ಯ** |
| ಸಹಾಯಕ ನಿರ್ದೇಶಕರು | : | **ಶ್ರೀ ಸಿ. ವಿ. ನಾಗರಾಜ್** |
| ಸಲಹೆ ಹಾಗೂ ನೆರವು | : | **ಶ್ರೀ ಡಿ. ಆರ್. ಕೃಷ್ಣಮೂರ್ತಿ** |
| ಸಹಾಯಕ ಸಿಬ್ಬಂದಿ | : | **ಶ್ರೀ ಎಸ್. ಸದಾಶಿವನ್** |

# ಮುನ್ನುಡಿ

ಭಾರತ ಜನಸಂಖ್ಯಾ ಯೋಜನೆ-3 ಕರ್ನಾಟಕ ಇದರ ಅಂಗವಾಗಿ ಪ್ರಾದೇಶಿಕ ಜನಸಂಖ್ಯಾಶಿಕ್ಷಣ ಕೇಂದ್ರ, ವಿಶ್ವವಿದ್ಯಾಲಯ ಶಿಕ್ಷಣ ಕಾಲೇಜ ಧಾರವಾಡ, ನಡೆಸುತ್ತಿರುವ 'ಜನಸಂಖ್ಯಾ ಶಿಕ್ಷಣ' ಜ್ಞಾನಪ್ರಸಾರದ ಯೋಜನೆಗಳಲ್ಲಿ ಜನಸಂಖ್ಯಾ ಶಿಕ್ಷಣದ ವಿವಿಧ ಕ್ಷೇತ್ರಗಳ ಬಗ್ಗೆ ಸಮಗ್ರವಾದ ಮಾಹಿತಿಕೊಡಬಲ್ಲ 'ಪುಸ್ತಿಕೆಮಾಲೆ' ಅತ್ಯಂತ ಮಹತ್ವದ್ದಾಗಿದೆ. ಈ 'ಪುಸ್ತಿಕೆಮಾಲೆ'ಯ ಉದ್ದೇಶಗಳು ಎರಡು: ಮೊದಲನೆಯದಾಗಿ, ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವ (ಮತ್ತು 'ಜನಸಂಖ್ಯಾ ಶಿಕ್ಷಣದಲ್ಲಿ' ತರಬೇತಿ ಪಡೆದ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ, ಕ್ಷೇತ್ರಾಭಿವೃದ್ಧಿ (Block Development) ವಯಸ್ಕರ ಶಿಕ್ಷಣ ಇತ್ಯಾದಿ ಇಲಾಖೆಗಳಲ್ಲಿಯ ಕ್ಷೇತ್ರ—ಕಾರ್ಯಕರ್ತರ ಉಪಯೋಗಕ್ಕಾಗಿ ಕನ್ನಡದಲ್ಲಿ ಸುಲಭ ಶೈಲಿಯಲ್ಲಿ 'ಜನಸಂಖ್ಯಾಶಿಕ್ಷಣ' ಈ ವಿಷಯದ ಬಗ್ಗೆ ಸಮಗ್ರವಾದ ಮಾಹಿತಿಯನ್ನು ಪೂರೈಸುವುದು. ಎರಡನೆಯದಾಗಿ, ಜನಸಾಮಾನ್ಯರಲ್ಲಿ ಜನಸಂಖ್ಯಾ—ಸ್ಫೋಟನೆ ಮತ್ತು ಅದರಿಂದುಂಟಾಗುತ್ತಿರುವ ಅನಿಷ್ಟ ಪರಿಣಾಮಗಳ ಬಗ್ಗೆ ಅರಿವು ಮೂಡಿಸಿ, ಅವರಲ್ಲಿ ಚಿಕ್ಕ ಕುಟುಂಬದ ಬಗ್ಗೆ ಕ್ರಿಯಾತ್ಮಕ ಮನೋಧೋರಣೆಯು ಮೂಡಿಬರುವಂತೆ ಮಾಡುವುದು. ಈ ದೃಷ್ಟಿಯಿಂದ ಇದೊಂದು ಜನಪ್ರಿಯ 'ಪುಸ್ತಿಕೆಮಾಲೆ' ಎಂದೇ ಹೇಳಬೇಕು.

ವಿಶ್ವವಿದ್ಯಾಲಯ ಶಿಕ್ಷಣ ಕಾಲೇಜದಲ್ಲಿ, 1985-86ನೇ ಸಾಲಿನಲ್ಲಿ ನನ್ನ ಅಧ್ಯಕ್ಷತೆಯಲ್ಲಿ ನಡೆದ 'ಜನಸಂಖ್ಯಾ ಶಿಕ್ಷಣ' ವಿಷಯತಜ್ಞರ ಮತ್ತು ನುರಿತ ಲೇಖಕರ ಮೂರು ಕಾರ್ಯಾಗಾರಗಳ ಮೂಲಕ ಈ 'ಪುಸ್ತಿಕೆಮಾಲೆ'ಯ ಪ್ರಥಮ ಹಂತವಾಗಿ 20 ಪುಸ್ತಿಕೆಗಳನ್ನು ತಯಾರಿಸಲಾಗಿದೆ.

ಈ ಪುಸ್ತಿಕೆಗಳು ಅಚ್ಚಾಗಿ ಹೊರಬಂದೊಡನೆ, ಕೇಂದ್ರದ ಈ ಸೇವೆಯ ಸಂಪೂರ್ಣ ಪ್ರಯೋಜನ ಪಡೆದ ವಿವಿಧ ಇಲಾಖೆಗಳಲ್ಲಿಯ ಕ್ಷೇತ್ರ—ಕಾರ್ಯಕರ್ತರು 'ಕುಟುಂಬ—ಕಲ್ಯಾಣ'ವನ್ನು ಸಾಧಿಸಿ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ. ಇದರಂತೆ ಜನಸಾಮಾನ್ಯರೂ ಈ ಪುಸ್ತಿಕೆಗಳನ್ನು ಓದಿ ಅವುಗಳ ಪ್ರಯೋಜನವನ್ನು ಪಡೆಯಲಿ.

ಈ ಕಾರ್ಯದಲ್ಲಿ ಭಾಗವಹಿಸಿ ಮನಮುಟ್ಟಿ ಸಹಕರಿಸಿದವರೆಲ್ಲರಿಗೂ ನನ್ನ ಧನ್ಯವಾದಗಳು.

ಡಾ: ಜಿ. ಎಂ. ಪಟ್ಟೇದ
ಯೋಜನಾಧಿಕಾರಿ
ಪ್ರಾದೇಶಿಕ ಜನಸಂಖ್ಯಾ ಶಿಕ್ಷಣ ಕೇಂದ್ರ
ವಿಶ್ವವಿದ್ಯಾಲಯ ಶಿಕ್ಷಣ ಕಾಲೇಜ

ಧಾರವಾಡ—1.
15-8-1986.

# ಜನಸಂಖ್ಯಾ ಪರಿಕಲ್ಪನೆಗಳು

## ಪೀಠಿಕೆ

ಹಳ್ಳಿಯ ಸಾಮಾನ್ಯ ಬೋರೆಗೌಡನಿಂದ ಹಿಡಿದು ಸಮಾಜದ ಎಲ್ಲ ವರ್ಗದ ಜನರ ಜೀವನದ ಮೇಲೆ ಪ್ರತ್ಯೇಕವಾಗಿ ಮತ್ತು ಪರೋಕ್ಷವಾಗಿ ಗಂಭೀರ ಪರಿಣಾಮ ಬೀರುತ್ತಿರುವ ಸಮಸ್ಯೆ ಎಂದರೆ ಇಂದಿನ ಜನಸಂಖ್ಯಾ ಬೆಳವಣಿಗೆ. ಸಮಾಜದಲ್ಲಿ ಸುಖ, ಶಾಂತಿ ಮತ್ತು ನೆಮ್ಮದಿಯಿಂದ ಬಾಳ ಬೇಕಿದ್ದರೆ ಪ್ರತಿಯೊಂದು ವ್ಯಕ್ತಿಗೆ ಈ ಜನಸಂಖ್ಯೆಯ ಆಗು ಹೋಗುಗಳು ಮತ್ತು ಅದರಿಂದ ಆಗುವ ವಿವಿಧ ಪರಿಣಾಮಗಳು ಇವುಗಳ ಸಾಮಾನ್ಯ ಜ್ಞಾನ ಅತ್ಯಂತ ಅವಶ್ಯ. ತನ್ನ ಪರಿಸರದಲ್ಲಿ ಮತ್ತು ದೇಶದಲ್ಲಿ ಜನಸಂಖ್ಯೆ ಎಷ್ಟಿದೆ ? ಜನಸಂಖ್ಯೆ ಯಾವ ರೀತಿ ಬದಲಾಗುತ್ತಿದೆ ? ಈ ಬದಲಾವಣೆಗೆ ಕಾರಣಗಳು ಯಾವುವು ? ಇದು ಜೀವನದ ವಿವಿಧ ರಂಗಳದಲ್ಲಿ ಹೇಗೆ ಪ್ರಭಾವ ಬೀರುತ್ತಿದೆ ? ಈ ಜನ ಸಂಖ್ಯಾ ಸ್ಥಿತಿ–ಗತಿ ಜನರ ಕಲ್ಯಾಣಕ್ಕೆ ಹೇಗೆ ಸಂಬಂಧ ಪಟ್ಟಿದೆ ? ಈ ಮೊದಲಾದ ವಿಷಯುಗಳ ಜ್ಞಾನ ಪ್ರತಿಯೊಬ್ಬ ನಾಗರಿಕನಿಗೆ ಇರಲೇ ಬೇಕಾದ ಮೂಲಭೂತ ಪ್ರಜ್ಞೆ. ಈ ಎಲ್ಲ ಸಂಗತಿಗಳನ್ನು ಅರ್ಥ ಮಾಡಿಕೊಳ್ಳುವ ಪೂರ್ವದಲ್ಲಿ ಜನಸಂಖ್ಯೆಗೆ ಸಂಬಂಧಪಟ್ಟ ವಿವಿಧ ಪರಿಕಲ್ಪನೆಗಳನ್ನು ತಿಳಿದುಕೊಳ್ಳುವುದು ಅವಶ್ಯ.

## ಜನಸಂಖ್ಯಾ ಚಲನಶಾಸ್ತ್ರ

ಜನಸಂಖ್ಯಾ ಚಲನಶಾಸ್ತ್ರ ಅಂದರೆ ಒಂದು ಪ್ರದೇಶದಲ್ಲಿಯ ಜನಸಂಖ್ಯೆಯ ಸ್ಥಿತಿ–ಗತಿ ಮತ್ತು ಅದಕ್ಕೆ ಸಂಬಂಧಪಟ್ಟ ಅಂಶಗಳನ್ನು ಕ್ರಮಬದ್ಧವಾಗಿ ಅಭ್ಯಾಸ ಮಾಡುವುದೇ ಆಗಿದೆ. ಯಾವದೇ ಒಂದು ಪ್ರದೇಶದಲ್ಲಿಯ ಜನಸಂಖ್ಯೆಯು ಜನನ, ಮರಣ, ವಲಸೆ, ಭೌಗೋಲಿಕ, ಆರ್ಥಿಕ ಮತ್ತು ನೈಸರ್ಗಿಕ ಪರಿಸರಗಳ ಮೂಲಕವಾಗಿ ನಿರಂತರವಾಗಿ ಹಾಗೂ ಸಹಜವಾಗಿ ಬದಲಾಗುತ್ತಿರುತ್ತದೆ ಮತ್ತು ಅದರ ಪ್ರಭಾವವು ಜನಜೀವನದ ಮೇಲೆ ಅನವರತವಾಗಿ ಬದಲಾಗುತ್ತಿರುತ್ತದೆ. ಈ ನಿರಂತರ ಬದಲಾವಣೆಗಳ ಅಭ್ಯಾಸವೇ ಜನ ಸಂಖ್ಯಾ ಚಲನಶಾಸ್ತ್ರ.

ಜನಸಂಖ್ಯಾ ಚಲನಶಾಸ್ತ್ರ ಒಂದು ಸಮಾಜ ವಿಜ್ಞಾನ. ಸಮಾಜ ಶಾಸ್ತ್ರದ ಒಂದು ಭಾಗ. ಇತರ ಸಮಾಜಶಾಸ್ತ್ರದಂತೆ ಇದೂ ಒಂದು ವಸ್ತುನಿಷ್ಠ ವಿಜ್ಞಾನ, ಇದಕ್ಕೆ ಇದರದೇ ಆದ ನಿರ್ಧಿಷ್ಟ ಅಭ್ಯಾಸ ಕ್ಷೇತ್ರ ಇದೆ, ಜನಸಂಖ್ಯೆ, ಅದರ ವಿವಿಧ ರಚನೆ. ಜನಸಂಖ್ಯೆಯ ಬದಲಾವಣೆ ಇದರ ಕಾರಣಗಳು ಮತ್ತು ಜನಸಂಖ್ಯೆ ಮಾನವನ ಒಟ್ಟು ಕಲ್ಯಾಣದ ಮೇಲೆ ಬೀರುವ ವಿಭಿನ್ನ ಪ್ರಭಾವ ಇವುಗಳ ಅಭ್ಯಾಸವೇ ಜನಸಂಖ್ಯಾ ಶಾಸ್ತ್ರದ ಅಭ್ಯಾಸ ಕ್ಷೇತ್ರ. ಭೌತಶಾಸ್ತ್ರ, ರಸಾಯನಶಾಸ್ತ್ರ ಮುಂತಾದ ನೈಸರ್ಗಿಕ ವಿಜ್ಞಾನಗಳಂತೆ ಜನಸಂಖ್ಯಾ ಚಲನಶಾಸ್ತ್ರವು ನಿಖರ ವಾದದ್ದು ಅಲ್ಲ. ಈ ವಿಜ್ಞಾನವು ವಸ್ತು ಸ್ಥಿತಿಯನ್ನು ಸಂಗ್ರಹಿಸಲು ರೀತಿ, ನಿಯಮಾ ವಳಿಗಳನ್ನು ನಿರೂಪಿಸಲು, ವೈಜ್ಞಾನಿಕ ಕ್ರಮಗಳಾದ ಸಮೀಕ್ಷೆ. ಸಂದರ್ಶನ ಪ್ರಯೋಗ, ಜನಗಣತಿ ಮೊದಲಾದ ಕ್ರಮಗಳನ್ನು ಅನುಸರಿಸುವುದು. ನಾವು ಭಾರತದಲ್ಲಿ ಜನ ಸಂಗತಿಗೆ ಸಂಬಂಧಪಟ್ಟ ಸತ್ಯ ಸಂಗತಿಗಳನ್ನು ಕಂಡುಕೊಳ್ಳಲು ಸರ್ವೇ ಸಾಮಾನ್ಯವಾಗಿ ಜನಗಣತಿ ಎಂಬ ವಿಜ್ಞಾನವನ್ನು ಉಪಯೋಗಿಸುತ್ತೇವೆ. ನಮ್ಮ ದೇಶದಲ್ಲಿ ಪ್ರತಿ 10 ವರ್ಷಗಳಿ ಗೊಮ್ಮೆ ದೇಶದಾದ್ಯಂತ ಜನಗಣತಿ ಕಾರ್ಯ ಕೈ ಕೊಳ್ಳಲ್ಪಡುತ್ತಿದೆ. ಭಾರತದಲ್ಲಿ ಮೊಟ್ಟ ಮೊದಲು ಜನಗಣತಿ ಕ್ರಿ, ಶ. 1881ರಲ್ಲಿ ನಡೆಯಿತು. ಇದಕ್ಕಿಂತ ಪೂರ್ವದಲ್ಲಿ ದೇಶ ದಾದ್ಯಂತ ಜನಗಣತಿ ನಡೆದ ದಾಖಲಾತೆಗಳು ಇಲ್ಲ. ಇತ್ತೀಚೆಗೆ ಕ್ರಿ.ಶ. 1981ರಲ್ಲಿ ಜನ ಗಣತಿ ಕೈಕೊಳ್ಳಲಾಗಿದೆ.

## ಜನಗಣತಿಯ ಅರ್ಥ

ನಿಗದಿತ ಕಾಲದಲ್ಲಿ ಒಂದು ಪ್ರದೇಶದಲ್ಲಿ ವಾಸಿಸುವ ಜನರ ಲೆಕ್ಕಾಚಾರ ಮತ್ತು ಆ ಜನರ ಆರ್ಥಿಕ ಮತ್ತು ಸಾಮಾಜಿಕ ಸಂಗತಿಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಸಂಗ್ರ ಹಿಸುವ, ಕ್ರೋಢೀಕರಿಸುವ, ಪರಿಶೀಲಿಸುವ, ವಿಶ್ಲೇಷಿಸುವ ಮತ್ತು ಪ್ರಕಟಿಸುವ ಕಾರ್ಯ ಕ್ರಮವೇ ಜನಗಣತಿ. ಭಾರತದ ವಿಶಾಲ ದೇಶದಲ್ಲಿ ಇದು ಒಂದು ಬೃಹತ್ ಕಾರ್ಯಕ್ರಮ ವಾಗಿದೆ. ದೇಶದಾದ್ಯಂತ ನಾವು ಪ್ರತಿ ದಶಕದ ಆರಂಭದಲ್ಲಿ ಜನಗಣತಿಯನ್ನು ಕೈಕೊಳ್ಳುತ್ತೇವೆ. ಈ ಕೆಲಸ ಮಾಡಲು ಪ್ರತ್ಯೇಕ ಇಲಾಖೆಯೇ ಇದೆ. ಮತ್ತು ಇದರ ಜವಾಬ್ದಾರಿಯನ್ನು ಭಾರತದ ಕೇಂದ್ರ ಸರಕಾರ ನೋಡಿಕೊಳ್ಳುತ್ತಿದೆ. ಈ ಜನಗಣತಿ ಕಾರ್ಯಕ್ಕಾಗಿಯೇ ಕೇಂದ್ರದಲ್ಲಿ ಮತ್ತು ಎಲ್ಲಾ ರಾಜ್ಯಗಳಲ್ಲಿ ಪ್ರತ್ಯೇಕ ಜನಗಣತಿ ಇಲಾಖೆಯೇ ಇದೆ.

ಭಾರತೀಯ ಜನಗಣತಿಯ ಲಕ್ಷಣಗಳು:– ಜನಗಣತಿಯು ಈ ಕೆಳಗಿನ ಲಕ್ಷಣಗಳನ್ನು ಹೊಂದಿದೆ.

1) **ರಾಷ್ಟ್ರ ವ್ಯಾಪಕ ಅನ್ವಯುತೆ** :–

ನಮ್ಮ ಜನಗಣತಿಯು ಇಡೀ ರಾಷ್ಟ್ರಕ್ಕೆ ಅನ್ವಯಿಸುತ್ತದೆ. ಇಡೀ ದೇಶದ ನಿರ್ದಿಷ್ಟ ಕಾಲದ ಒಟ್ಟೂ ಜನಸಂಖ್ಯೆಯನ್ನು ಎಣಿಸಲಾಗುವುದು.

2) **ವ್ಯಕ್ತಿಯೇ ಮೂಲ ಘಟಕ** :–

ಜನಗಣತಿಯ ಮೂಲ ಘಟಕ ವ್ಯಕ್ತಿ. ಪ್ರತಿಯೊಬ್ಬ ವ್ಯಕ್ತಿಯನ್ನೂ ಪ್ರತ್ಯೇಕವಾಗಿ ಒಮ್ಮೆ ಮಾತ್ರ ಎಣಿಕೆ ಮಾಡಲಾಗುವುದು, ವಯಸ್ಸು, ಲಿಂಗ, ವೃತ್ತಿ, ವೈವಾಹಿಕ ಸ್ಥಿತಿ ಧರ್ಮ, ಸಾಕ್ಷರತೆ ಮುಂತಾದವುಗಳ ಬಗ್ಗೆ ಮಾಹಿತಿಯನ್ನೂ ಪ್ರತ್ಯೇಕವಾಗಿ ಸಮೂದಿಸಿಕೊಳ್ಳಲಾಗುವುದು.

3) **ನಿರ್ಧಿಷ್ಟ ಪ್ರದೇಶ** :–

ಜನಗಣತಿಯು ನಿರ್ಧಿಷ್ಟ ಪ್ರದೇಶಕ್ಕೆ ಅನ್ವಯುವಾಗುತ್ತದೆ. ಜನಗಣತಿಯ ಪ್ರದೇಶವು ನಿರ್ಧಿಷ್ಟ ಹಾಗೂ ಖಚಿತವಾದ ಒಂದು ಪ್ರದೇಶವನ್ನೂ ಹೊಂದಿರುತ್ತದೆ, ಉದಾ-ಹಳ್ಳಿ, ತಾಲೂಕು, ಜಿಲ್ಲೆ. ರಾಜ್ಯ ಅಥವಾ ರಾಷ್ಟ್ರ.

4) **ನಿರ್ಧಿಷ್ಟ ಕಾಲ** :—

ಜನಗಣತಿಯು ನಿರ್ಧಿಷ್ಟ ಕಾಲಕ್ಕೆ ಮಾತ್ರ ಅನ್ವಯುವಾಗುತ್ತದೆ. ಆ ಕಾಲದ ಸಮಗ್ರ ಜನಸಂಖ್ಯೆಯನ್ನೂ ಎಣಿಸಲಾಗುವುದು.

5) **ರಹಸ್ಯವನ್ನು ಕಾಪಾಡುವದು** :—

ಜನಗಣತಿಯಲ್ಲಿ ಸಂಗ್ರಹಿಸಿದ ವೈಯಕ್ತಿಕ ಮಾಹಿತಿಗಳನ್ನು ರಹಸ್ಯವಾಗಿ ಇಡಲಾಗುವುದು. ಜನಗಣತಿಯ ಮಾಹಿತಿಯನ್ನೂ ರಹಸ್ಯವಾಗಿಡುವ ಬಗ್ಗೆ ಜನರಿಗೆ ಖಾತ್ರಿ ಮಾಡಿಕೊಡಲಾಗಿದೆ.

## ಭಾರತೀಯ ಜನಗಣತಿಯ ಉದ್ದೇಶಗಳು :-

ನಮ್ಮ ಭಾರತೀಯ ಜನಗಣತಿಯು ಈ ಕೆಳಗಿನ ಉದ್ದೇಶಗಳನ್ನು ಹೊಂದಿದೆ.

1) ದೇಶದಲ್ಲಿ, ವಿವಿಧ ರಾಜ್ಯಗಳಲ್ಲಿ ಮತ್ತು ವಿವಿಧ ಪ್ರದೇಶಗಳಲ್ಲಿ ವಾಸಿಸುವ ಒಟ್ಟು ಜನ ಸಂಖ್ಯೆಯನ್ನು ತಿಳಿದುಕೊಳ್ಳುವುದು.

2) ದೇಶದಲ್ಲಿಯ ವಿವಿಧ ಭಾಗಗಳಲ್ಲಿ ಜನನದರ, ಮರಣದರ, ವಲಸೆ ಜನರ ವಯೋಮಾನ, ಜನರ ಜಾತಿ, ಮತ, ಪಂಥಗಳ ಮಾಹಿತಿ ಪಡೆಯುವುದು.

3) ದೇಶದ ವಿವಿಧ ಭಾಗಗಳಲ್ಲಿ ವಾಸಿಸುವ ಕುಟುಂಬಗಳ ಸಂಖ್ಯೆ, ಕುಟುಂಬದ ಗಾತ್ರ, ವೈವಾಹಿಕ ಜೀವನದ ಸ್ಥಿತಿ, ಗತಿ. ರಾಷ್ಟ್ರೀಯತೆ, ಮನೆಗಳ ಸಂಖ್ಯೆ ರೂಪ. ಕುಟುಂಬದ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ಮಾಹಿತಿ ಸಂಗ್ರಹಿಸುವುದು.

4) ದೇಶದ ಎಲ್ಲ ವರ್ಗದ ಜನರ ಉದ್ಯೋಗ, ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳ ಅಧ್ಯಯನ ಮಾಡುವುದು.

5) ದೇಶದ ಜನರ ಸಂಸ್ಕೃತಿ, ಭಾಷೆ ಮತ್ತು ಶಿಕ್ಷಣ ಮಟ್ಟದ ಮಾಹಿತಿ ಸಂಗ್ರಹ,

6) ದೇಶದ ವಿವಿಧ ಭಾಗಗಳಲ್ಲಿ ಜನ ಸಾಂದ್ರತೆ, ಮತ್ತು ನಗರೀಕರಣದ ಮಾಹಿತಿ ಪಡೆಯುವುದು.

7) ದೇಶದಲ್ಲಿಯ ವಿವಿಧ ಕೈಗಾರಿಕೆಗಳ ಸಂಖ್ಯೆ, ಉದ್ಯಮೀಕರಣ ಮತ್ತು ಗ್ರಾಮೀಣ ಕೈಗಾರಿಕೆಗಳ ಸ್ಥಿತಿ ಗತಿ ಮತ್ತು ಆರ್ಥಿಕ ಅಂಗ ರಚನೆಗಳ ಮಾಹಿತಿ ಪಡೆಯುವುದು.

8) ದೇಶದ ವಿವಿಧ ಸಂಪರ್ಕ ಸಾಧನಗಳ ಮಾಹಿತಿ ಸಂಗ್ರಹ

9) ದೇಶದ ವಿವಿಧ ಸಂಪನ್ಮೂಲ, ರಾಷ್ಟ್ರೀಯ ಆದಾಯ ಮತ್ತು ಜನರ ಜೀವನ ಮಟ್ಟಗಳ ಅಧ್ಯಯನ ಮಾಡುವುದು.

## ರಾಷ್ಟ್ರೀಯ ಜನಗಣತಿ ಕಾರ್ಯಕ್ರಮದಿಂದ ಆಗುವ ಲಾಭಗಳು:-

ಜನಗಣತಿ ಕಾರ್ಯಕ್ರಮದಿಂದಾಗಿ ದೇಶಕ್ಕೆ ಈ ಕೆಳಗಿನ ಲಾಭಗಳು ಆಗುತ್ತವೆ.

1) **ಸಾಮಾಜಿಕ ಲಾಭ:—**

ಈ ವ್ಯಾಪಕ ಜನಗಣತಿಯಿಂದ ನಮ್ಮ ದೇಶದಲ್ಲಿ ಮತ್ತು ಅದರ ವಿವಿಧ ಭಾಗ ಗಳಲ್ಲಿ ಇರುವ ಸಾಮಾಜಿಕ ಸಮಸ್ಯೆಗಳಾವುವು ? ಈ ಸಾಮಾಜಿಕ ಸಮಸ್ಯೆ ಗಳಿಗೆ ಕಾರಣಗಳು ಯಾವುವು ? ಎಂಬುದು ತಿಳಿದು ಬರುವುದು. ಸಮಾಜದ ಅಗತ್ಯಗಳು ಯಾವುವು? ಸಾಮಾಜಿಕ ಸುಧಾರಣೆಗೆ ಯಾವ ಯಾವ ಕ್ರಮಗಳು ಅಗತ್ಯ ಎಂಬುದು ತಿಳಿದು ಬರುತ್ತದೆ ; ಮತ್ತು ಅದರಂತೆ ಸಮಾಜ ಸುಧಾರಣಾ ಕಾರ್ಯಕ್ರಮಗಳನ್ನೂ ರೂಪಿಸಿಕೊಳ್ಳಲು ಈ ಜನಗಣತಿಯು ಸಾಧನವಾಗುತ್ತದೆ.

2) **ಆರ್ಥಿಕ ಲಾಭ :—**

ಸಮಾಜದ ಜನರ ಆರ್ಥಿಕ ಮಟ್ಟ ಹೇಗಿದೇ ? ವಿವಿಧ ಪ್ರದೇಶಗಳಲ್ಲಿ ಆರ್ಥಿಕ ಉತ್ಪಾದನೆ ಹೇಗೆ ನಡೆಯುತ್ತಿದೆ ? ನಮ್ಮ ವಿವಿಧ ಆರ್ಥಿಕ ಸಮಸ್ಯೆ ಗಳು ಯಾವುವು ? ವಿವಿಧ ಪ್ರದೇಶಗಳ ನಡುವಿನ ಆರ್ಥಿಕ ಅಸಮಾನತೆಯ ಕಾರಣಗಳು ಯಾವುವು ? ನಮ್ಮ ಔದ್ಯೋಗೀಕರಣದ ವಿವಿಧ ಪ್ರತಿಫಲಗ ಳಾವುವು ? ಮೊದಲಾದ ಆರ್ಥಿಕ ವಿಷಯಗಳನ್ನು ತಿಳಿದುಕೊಂಡು ಜನ ಹಿತಕ್ಕಾಗಿ ವಿವಿಧ ಆರ್ಥಿಕ ಕಾರ್ಯಕ್ರಮಗಳನ್ನು ಕೈಕೊಳ್ಳಲು ನಮ್ಮ ರಾಷ್ಟ್ರೀಯ ಜನಗಣತಿ ಕಾರ್ಯಕ್ರಮ ಬಹಳ ಸಹಾಯಕವಾಗಿದೆ.

3) **ಜನ ಸಂಖ್ಯಾ ನೀತಿ ರೂಪಿಸುವುದು:—**

ನಮ್ಮ ಜನ ಸಂಖ್ಯೆ ಏರುತ್ತಿದಿಯೋ ಇಳಿಯುತ್ತಿದೆಯೋ ? ಈ ಏರಿಳಿತಗಳಿಗೆ ಕಾರಣಗಳು ಯಾವುವು ? ಇದರಿಂದ ಜನಜೀವನದ ಗುಣಮಟ್ಟದ ಮೇಲೆ ಪರಿಣಾಮ ಉಂಟಾಗುತ್ತಿದೆ ಎಂಬ ಅಂಶ ಜನಗಣತಿಯಿಂದ ತಿಳಿದು ಬರು ತ್ತದೆ. ಇದರಿಂದ ಜನರ ಕಲ್ಯಾಣಕ್ಕಾಗಿ ಸರಿಯಾದ ರಾಷ್ಟ್ರೀಯ ಜನಸಂಖ್ಯಾ ನೀತಿಯನ್ನೂ ರೂಪಿಸಿಕೊಳ್ಳಲು ಈ ಜನಗಣತಿ ತುಂಬಾ ಸಹಾಯಕವಾಗಿದೆ.

4) **ರಾಜಕೀಯ ಉಪಯುಕ್ತತೆ :—**

ರಾಜಕೀಯವಾಗಿಯೂ ಈ ರಾಷ್ಟ್ರೀಯ ಜನಗಣತಿ ಕಾರ್ಯಕ್ರಮ ಬಹಳ ಉಪಯುಕ್ತವಾಗಿದೆ. ದೇಶದ ವಿವಿಧ ಭಾಗಗಳಲ್ಲಿ ಮತದಾರರು ಎಷ್ಟಿದ್ದಾರೆ ? ಈ ವಿವಿಧ ಮತದಾರರು ಹೇಗೆ ಹಂಚಲ್ಪಟ್ಟಿದ್ದಾರೆ, ವಿವಿಧ ಜಾತಿ ಮತ ಪಂಥಗಳ ಜನರು ಎಷ್ಟಿದ್ದಾರೆ ? ಎಂಬುದರ ಸರಿಯಾದ ಕಲ್ಪನೆ ಉಂಟಾಗುತ್ತದೆ. ಇದರಿಂದ ದೇಶದಲ್ಲಿ ರಾಜಕೀಯ ಕಾರ್ಯಕ್ರಮಗಳನ್ನೂ ರೂಪಿಸುವಲ್ಲಿ ದೇಶಕ್ಕೆ ಬಹಳ ಸಹಾಯಕವಾಗಿದೆ.

5) **ಯೋಜನೆ ರೂಪಿಸುವುದು :—**

ಹಿಂದಿನ ಅನೇಕ ಜನಗಣತಿ ಮಾಹಿತಿಗಳನ್ನು ಇಂದಿನ ಮಾಹಿತಿಯೊಂದಿಗೆ ಹೋಲಿಸಿ ನಮ್ಮ ದೇಶದ ಹಾಗೂ ಜನರ ಪ್ರಗತಿ ಹೇಗಾಗಿದೆ ಎಂದು ತಿಳಿದು ಮುಂದಿನ ಯೋಜನೆಯನ್ನೂ ರೂಪಿಸಲು ಈ ಜನಗಣತಿ ತುಂಬಾ ಸಹಾಯಕವಾಗಿದೆ.

ಜನಗಣತಿಯಿಂದ ಸಂಗ್ರಹಿಸಿದ ವಿವಿಧ ಅಂಕಿಅಂಶಗಳನ್ನು ಅರ್ಥಮಾಡಿಕೊಳ್ಳಲು ಮತ್ತು ಜನಸಂಖ್ಯೆಯ ಕುರಿತು ಸರಿಯಾದ ಅರ್ಥವನ್ನೂ ಗ್ರಹಿಸಲು ಜನಸಂಖ್ಯಾ ಶಾಸ್ತ್ರದಲ್ಲಿಯ ಕೆಲವು ಮೂಲ ಭೂತ ಪದಗಳ ಪರೀಕಲ್ಪನೆಯನ್ನು ತಿಳಿದುಕೊಳ್ಳುವುದು ಅವಶ್ಯ. ಅವುಗಳನ್ನು ಈ ಕೆಳಗೆ ಕೊಡಲಾಗಿದೆ.

**ಜನಸಂಖ್ಯೆ**

ಅನೇಕ ಕಡೆಗಳಲ್ಲಿ ಅನೇಕ ವಿಧಗಳಲ್ಲಿ ನಾವು ಜನರ ಸಮೂಹವನ್ನು ಕಾಣುತ್ತೇವೆ. ಈ ಎಲ್ಲಾ ಜನಸಮೂಹಗಳಿಗೆ ಜನಸಂಖ್ಯೆ ಎಂದು ಕರೆಯಲಾಗುವುದಿಲ್ಲ. ಉದಾಹರಣೆಗೆ ಚಿತ್ರಮಂದಿರದಲ್ಲಿರುವ ಪ್ರೇಕ್ಷಕರು ಅಥವಾ ಭಾರತದ ಲೋಕ ಸಭೆಯ ಸದಸ್ಯರು ಜನಸಂಖ್ಯೆ ಎಂದು ಎನಿಸಿಕೊಳ್ಳುವುದಿಲ್ಲ. ಈ ಜನಸಂಗ್ರಹಗಳ ಗಾತ್ರ ಮತ್ತು ಲಕ್ಷಣಗಳನ್ನು ಜನಸಂಖ್ಯಾ ಶಾಸ್ತ್ರೀಯ ಅಂಶಗಳ (ಜನನ. ಮರಣ. ವಲಸೆ) ನಿರ್ಧರಿಸುವುದಿಲ್ಲದ್ದರಿಂದ ಇವುಗಳನ್ನು ಜನಸಂಖ್ಯೆ ಎಂದು ಕರೆಯುವುದಿಲ್ಲ.

ಒಂದು ನಿರ್ದಿಷ್ಟ ಕಾಲ ಮತ್ತು ನಿರ್ದಿಷ್ಟ ಪ್ರದೇಶದಲ್ಲಿ ವಾಸಿಸುತ್ತಿರುವ ಒಟ್ಟೂ ಜನರ ಸಂಖ್ಯೆಯನ್ನು ಜನಸಂಖ್ಯೆ ಎಂದು ಕರೆಯಲಾಗುವುದು. ಈ ಜನರ ಸಮೂಹಗಳು ಯಾವಾಗಲೂ ಜನನ, ಮರಣ ಮತ್ತು ವಲಸೆ ಎಂಬ ಜನಸಂಖ್ಯಾ ಪ್ರಕ್ರಿಯೆಗಳಿಂದ ಪ್ರಭಾವಿತವಾಗಿರುತ್ತೇವೆ. ಅದೇ ರೀತಿ ಈ ಪ್ರಕ್ರಿಯೆಗಳೂ ಜನಸಂಖ್ಯೆಯ ಲಕ್ಷಣಗಳಿಂದ ಮತ್ತು ಸಂಸ್ಕೃತಿಯಿಂದ ಪ್ರಭಾವಿತವಾಗಿವೆ. ಈ ವ್ಯಾಖ್ಯೆಯಲ್ಲಿ ಪ್ರದೇಶ ಎಂಬ ಶಬ್ದವು ಭೌಗೋಳಿಕ ಪ್ರದೇಶಕ್ಕೆ ಅನ್ವಯವಾಗಬಹುದಾದರೂ ಹೆಚ್ಚಾಗಿ ರಾಜಕೀಯ ಗಡಿಯುಳ್ಳ ಖಂಡ, ದೇಶ, ರಾಜ್ಯ, ನಗರ, ಹಳ್ಳಿ ಮುಂತಾದವುಗಳಿಗೆ ಅನ್ವಯಿಸುತ್ತದೆ. ಜನಸಂಖ್ಯಾ ಸಮೂಹಗಳು ಸಾಮಾಜಿಕ ಸಮೂಹಗಳಿಂದ ಭಿನ್ನವಾಗಿರುತ್ತವೆ. ಸಾಮಾಜಿಕ ಸಮೂಹಗಳ ಆರ್ಥಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಪ್ರಭಾವಕ್ಕೆ ಒಳಪಟ್ಟು ತಾತ್ಕಾಲಿಕವಾಗಿರುತ್ತದೆ ಮತ್ತು ಜನನ, ಮರಣ, ಮತ್ತು ವಲಸೆಗಳನ್ನು ಅವಲಂಬಿಸಿರುವುದಿಲ್ಲ.

ಜನನ ದರ ಒಂದು ಪ್ರದೇಶದ ಮಧ್ಯ ವರ್ಷದ ಪ್ರತಿ ಸಾವಿರ ಜನಸಂಖ್ಯೆಗೆ ಆ ವರ್ಷದ ಹುಟ್ಟಿದ ಒಟ್ಟೂ ಮಕ್ಕಳ ಜನನ ಸಂಖ್ಯೆಗೆ ಆ ವರ್ಷದ ಜನನ ದರ ಅನ್ನುವರು. ಜನನ ದರವನ್ನು ಲೆಕ್ಕಚಾರ ಮಾಡಲು ಆ ಪ್ರದೇಶದ ವರ್ಷದ ಮಧ್ಯದ ಜನಸಂಖ್ಯೆಯನ್ನು ಗಣನೆಗೆ ತೆಗೆದುಕೊಳ್ಳಲು ಮುಖ್ಯ ಕಾರಣ ಏನೆಂದರೆ ಈ ಮಧ್ಯ ವರ್ಷದ ಜನಸಂಖ್ಯೆಯು ಇಡೀ ವರ್ಷದ ಸರಾಸರಿ ಜನಸಂಖ್ಯೆಗೆ ಸಾಮಾನ್ಯವಾಗಿ ಸರಿ ಇರುತ್ತದೆ ಮತ್ತು ಮಧ್ಯ ವರ್ಷದ ಜನಸಂಖ್ಯೆಯನ್ನು ಕಂಡು ಹಿಡಿಯುವುದು ಸುಲಭವಾಗುತ್ತದೆ. ಜನನ ದರವನ್ನೂ ಈ ಕೆಳಗಿನ ಸೂತ್ರವನ್ನು ಉಪಯೋಗಿಸಿ ಕಂಡುಕೊಳ್ಳಬಹುದು.

$$\text{ಜನನ ದರ} = \frac{\text{ಒಂದು ನಿರ್ದಿಷ್ಟ ಪ್ರದೇಶದಲ್ಲಿ ಇಡೀ ವರ್ಷದಲ್ಲಿ ಹುಟ್ಟಿದ ಒಟ್ಟೂ ಮಕ್ಕಳ ಸಂಖ್ಯೆ}}{\text{ಆ ಪ್ರದೇಶದ ಆ ವರ್ಷದ ಮಧ್ಯಕಾಲದಲ್ಲಿ ಇರುವ ಒಟ್ಟೂ ಜನಸಂಖ್ಯೆ}} \times 1000$$

ಉದಾಹರಣೆ :- 1981ನೇ ವರ್ಷದಲ್ಲಿ ಬೊಮ್ಮನಹಳ್ಳಿಯಲ್ಲಿ ಒಟ್ಟೂ 75 ಮಕ್ಕಳ ಜನನವಾಗಿದೆ. ಆ ಹಳ್ಳಿಯ ಆ ವರ್ಷದ ಮಧ್ಯಕಾಲದಲ್ಲಿಯ ಜನಸಂಖ್ಯೆ 3000 ಇತ್ತು. ಈ ಹಳ್ಳಿಯ 1981ನೇ ವರ್ಷದ ಜನನ ದರವನ್ನು ಈ ಕೆಳಗಿನಂತೆ ಕಂಡುಕೊಳ್ಳಬಹುದು.

$$\text{ಜನನ ದರ:} = \frac{\text{ಜನಿಸಿದ ಮಕ್ಕಳ ಸಂಖ್ಯೆ}}{\text{ವರ್ಷ ಮದ್ಯದ ಜನಸಂಖ್ಯೆ}} \times 1000$$

$$\frac{75}{3000} \times 1000$$

ಜನನ ದರ:= 25 ಅಂದರೆ 1981ರಲ್ಲಿ ಬೊಮ್ಮನಹಳ್ಳಿಯ ಜನಸಂಖ್ಯೆಯಲ್ಲಿ ಜನನ ದರ ಪ್ರತಿ ಸಾವಿರ ಜನಸಂಖ್ಯೆಗೆ 25.

ಕ್ರಿ. ಶ. 1981ರ ಜನಗಣತಿಯ ಪ್ರಕಾರ ಭಾರತದಲ್ಲಿ ಜನನ ದರ 36 ಅಂದರೆ ಭಾರತದಲ್ಲಿ 1981ರಲ್ಲಿ ಪ್ರತಿ ಸಾವಿರ ಜನರಿಗೆ 36 ಶಿಶುಗಳ ಜನನ ಆಗುತ್ತಿದೆ ಎಂದು ಅರ್ಥ.

ಜನನ ದರವು ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆಯಾಗಿರುತ್ತದೆ. ಜನನ ದರದಲ್ಲಿ ಉಂಟಾಗುವ ವ್ಯತ್ಯಾಸಕ್ಕೆ ಮುಖ್ಯವಾಗಿ ಜೀವನ ಮಟ್ಟದಲ್ಲಿ ಉಂಟಾಗುವ ಬದಲಾವಣೆ, ಸ್ತ್ರೀ ಶಿಕ್ಷಣ ಹಾಗೂ ಉದ್ಯೋಗವಕಾಶ ಮುಂತಾದ ಕಾರಣಗಳನ್ನು ಕೊಡಬಹುದು. ಇವಲ್ಲದೆ ಬಾಲ್ಯವಿವಾಹ, ಸಾಮಾಜಿಕ ಮೂಢನಂಬಿಕೆಗಳು, ಆಹಾರ, ವಾಯುಗುಣ ಮೊದಲಾದವು ಜನನ ದರದ ಮೇಲೆ ಪ್ರಭಾವ ಬೀರುತ್ತವೆ.

ಮರಣ ದರ ಜನನ ದರವನ್ನು ಕಂಡು ಹಿಡಿಯುವ ರೀತಿಯಲ್ಲಿಯೇ ಮರಣ ದರವನ್ನು ಕಂಡುಕೊಳ್ಳಬಹುದು. ಒಂದು ಪ್ರದೇಶದ ಮಧ್ಯ ವರ್ಷದ ಪ್ರತಿ ಸಾವಿರ ಜನಸಂಖ್ಯೆಗೆ ಅದೇ ವರ್ಷ ಮರಣ ಹೊಂದಿದ ಒಟ್ಟು ಜನರ ಸಂಖ್ಯೆಗೆ ಮರಣ ದರ ಅನ್ನುವರು.

$$\text{ಮರಣ ದರ:} = \frac{\text{ಮ}}{\text{ಜ}} \times 1000$$

ಮ : ಒಂದು ವರ್ಷದಲ್ಲಿ ಮರಣ ಹೊಂದಿದವರ ಒಟ್ಟು ಸಂಖ್ಯೆ

ಜ : ಅದೇ ವರ್ಷದ ಮಧ್ಯ ಭಾಗದ ಒಟ್ಟು ಜನಸಂಖ್ಯೆ

ಭಾರತದ ಜನಸಂಖ್ಯೆಯು ಮರಣ ದರ ಕ್ರಿ, ಶ. 1981 ಜನಗಣತಿಯ ಪ್ರಕಾರ 14.8 ಇದೆ. ಅಂದರೆ. ನಮ್ಮ ಭಾರತದ ಸೇವಾ ಪ್ರದೇಶದಲ್ಲಿ ಪ್ರತಿ ವರ್ಷ ಸರಾಸರಿ ಪ್ರತಿ ಸಾವಿರ ಜನಸಂಖ್ಯೆಗೆ 14.8 ರಷ್ಟು ಜನರು ಮರಣ ಹೊಂದುತ್ತಿದ್ದಾರೆ ಎಂದು ಅರ್ಥ.

ಒಂದು ಪ್ರದೇಶದ ಮರಣ ದರವು ಅಲ್ಲಿಯ ಹವಾಮಾನ, ನೈಸರ್ಗಿಕ ಪ್ರಕೋಪ, ಸಾಮಾಜಿಕ ಪ್ರಕೋಪ, ಜನರ ಆಹಾರ, ವಸತಿ. ಆರೋಗ್ಯ ಪರಿಸರ ಆರೋಗ್ಯ ಸೌಲಭ್ಯ ಗಳು ಮೊದಲಾದ ಸಂಗತಿಗಳನ್ನು ಅವಲಂಬಿಸಿರುತ್ತದೆ.

ಒಂದು ಪ್ರದೇಶದ ಜನನ ದರವು ಜನಸಂಖ್ಯೆಯ ಏರಿಕೆಯನ್ನೇ ತೋರಸುತ್ತಿದ್ದರೆ. ಮರಣ ದರವು ಜನಸಂಖ್ಯೆಯಲ್ಲಿಯ ಇಳಿಕೆಯನ್ನು ತೋರಿಸುವುದು.

ಶಿಶು ಮರಣ ದರ: ಜನಸಂಖ್ಯಾ ಶಾಸ್ತ್ರದಲ್ಲಿ ಸೊನ್ನೆ ವರ್ಷ ಅಥವಾ ಒಂದು ವರ್ಷ ತುಂಬದ, ಒಂದು ಗೊತ್ತಾದ ವಯಸ್ಸಿನವರನ್ನು ಶಿಶು ಎಂದು ವ್ಯಾಖ್ಯಾನಿಸಲಾಗಿದೆ, ಶಿಶು ಮರಣ ದರ ಎಂದರೆ ಒಂದು ವರ್ಷ ವಯಸ್ಸಿನೊಳಗಿರುವ ಶಿಶು ಮರಣ ಪ್ರಮಾಣ. ಒಂದು ಪ್ರದೇಶದಲ್ಲಿ ಒಂದೇ ವರ್ಷದಲ್ಲಿ ನೊಂದಾಯಿಸಲ್ಪಟ್ಟ ಪ್ರತಿ ಸಾವಿರ ಜೀವಂತ ಜನನಗಳ ಸಂಖ್ಯೆಗೆ ಅದೇ ವರ್ಷ ಮರಣ ಹೊಂದಿದ ಒಟ್ಟೂ ಶಿಶುಗಳ ಸಂಖ್ಯೆಯೇ ಶಿಶು ಮರಣ ದರ ಅನ್ನುವರು. ಶಿಶು ಮರಣ ದರವನ್ನು ಈ ಕೆಳಗಿನ ಸೂತ್ರವನ್ನು ಉಪಯೋಗಿಸಿ ಕಂಡಕೊಳ್ಳಬಹುದು,

$$\text{ಶಿಶು ಮರಣ ದರ} = \frac{\text{ಮ—0}}{\text{ಜ}} \times \text{ಕ}$$

ಮ—0 ಅಂದರೆ ಒಂದು ವರ್ಷ ವಯಸ್ಸಿನೊಳಗಿನ ಶಿಶುಗಳು ಒಂದು ವರ್ಷ ದಲ್ಲಿ ಮರಣ ಹೊಂದಿದ ಒಟ್ಟೂ ಸಂಖ್ಯೆ

ಜ— ಅಂದರೆ ಅದೇ ವರ್ಷದಲ್ಲಿ ನೊಂದಾಯಿಸಲ್ಪಟ್ಟ ಜೀವಂತ ಜನನ ಸಂಖ್ಯೆ

ಕ— ಎಂದರೆ 1,000

ಮುಂದುವರಿದ ದೇಶಗಳಿಗೆ ಹೋಲಿಸಿದಾಗ ಭಾರತದಲ್ಲಿ ಶಿಶು ಮರಣ ದರ ಹೆಚ್ಚಿಗೆ ಇದೆ. ಅನೇಕ ಅಂಶಗಳು ಶಿಶು ಮರಣದ ಮೇಲೆ ಪ್ರಭಾವವನ್ನು ಬೀರುತ್ತವೆ. ಅವುಗಳಲ್ಲಿ ಜೈವಿಕ, ಆರ್ಥಿಕ, ಸಾಮಾಜಿಕ, ಮತ್ತು ಪರಿಸರದ ಸಂಗತಿಗಳು ಮುಖ್ಯವಾಗಿವೆ.

ಅನಾರೋಗ್ಯ ದರ ; ಒಂದು ಪ್ರದೇಶದ ಜನಸಂಖ್ಯೆಯ ಎಲ್ಲ ಜನರು ಎಲ್ಲ ಕಾಲಗಳಲ್ಲಿ ಶಾರೀರಕವಾಗಿ ಪೂರ್ಣ ಆರೋಗ್ಯವಂತರಾಗಿ, ಸಾಮಾನ್ಯವಾಗಿ ಇರುವುದಿಲ್ಲ. ಸಾಂಕ್ರಾಮಿಕ ರೋಗಗಳು, ಅಂಟು ಜಾಡ್ಯ, ಆಹಾರದ ದೋಷ ಪರಿಸರ ಮಾಲಿನ್ಯ, ಶಾರೀರಕ ತೊಂದರೆ ಹೀಗೆ ಇನ್ನೂ ಅನೇಕ ಕಾರಣಗಳಿಂದ ಸ್ವಲ್ಪ ಕಾಲ ಅಥವಾ ಬಹಳ ಕಾಲ ಅನಾರೋಗ್ಯದಿಂದ ಬಳಲುವಂತಾಗುತ್ತದೆ. ಒಂದು ಪ್ರದೇಶದಲ್ಲಿ ನಿರ್ಧಿಷ್ಟ ಕಾಲದಲ್ಲಿ ಸಲಾಸರಿ, ಪ್ರತಿ ಸಾವಿರ ಜನ ಸಂಖ್ಯೆಯಲ್ಲಿ ಅನಾರೋಗ್ಯದಿಂದ ಬಳಲುವವರ ಸಂಖ್ಯೆಯನ್ನು ಆ ಪ್ರದೇಶದ ಆ ಕಾಲದ ಅನಾರೋಗ್ಯ ದರ ಎಂದು ಅನ್ನುವರು. ಅನಾರೋಗ್ಯ ದರವನ್ನು ಈ ಕೆಳಗಿನ ಸೂತ್ರದ ಸಹಾಯದಿಂದ ಕಂಡು ಹಿಡಿಯಬಹುದು.

$$\text{ಅನಾರೋಗ್ಯ ದರ} : \frac{\text{ಅ.ಜ.ಸಂ}}{\text{ಜ.ಸಂ.}} \times 1.000$$

ಅ ಜ.ಸಂ: ಅಂದರೆ ಅನಾರೋಗ್ಯದಿಂದ ಬಳಲುವವರ ಒಟ್ಟು ಜನಸಂಖ್ಯೆ

ಜ. : ಅಂದರೆ ಆ ಪ್ರದೇಶದ ಒಟ್ಟು ಜನಸಂಖ್ಯೆ.

ಒಂದು ಪ್ರದೇಶದ ಅನಾರೋಗ್ಯ ದರವನ್ನು ಕಂಡುಕೊಳ್ಳಲು ಬೇಕಾಗುವ ಅಂಕಿ ಅಂಶಗಳನ್ನು ರಾಷ್ಟ್ರೀಯ ಜನಗಣತಿ ಕಾರ್ಯಕ್ರಮದಿಂದ ಪಡೆಯುವುದಿಲ್ಲ. ಇದನ್ನು ವಿಶೇಷ ಆರೋಗ್ಯ ಸಮೀಕ್ಷೆಯ ಮೇಲಿಂದ ಪಡೆಯುವರು, ಅಥವಾ ಅಂದಾಜಿಸುವರು. ಅನಾರೋಗ್ಯ ದರವು ದೇಶದ ಜನತೆಯ ದೈಹಿಕ ಆರೋಗ್ಯದ ಸ್ಥಿತಿಗತಿಯನ್ನು ತಿಳಿಸುವುದಲ್ಲದೆ, ಜನರ ವಿಶಿಷ್ಟ ಆರೋಗ್ಯ ಕಾರ್ಯಕ್ರಮದ ಅಗತ್ಯತೆ ಮತ್ತು ಅದಕ್ಕೆ ಸಂಬಂಧಪಟ್ಟ ಆರೋಗ್ಯ ಕಾರ್ಯಕ್ರಮದ ಯೋಜನೆಯನ್ನು ಯಶಸ್ವಿಯಾಗಿ ಜಾರಿಗೆ ತರುವಲ್ಲಿಬಹಳ ಸಹಾಯಕವಾಗುವುದು.

ನಮ್ಮ ದೇಶದ ಜನಸಂಖ್ಯೆಯ ಅನಾರೋಗ್ಯ ದರ ಬಹಳ ಹೆಚ್ಚು. ಒಂದು ಸಮೀಕ್ಷೆಯ ಅಂದಾಜ ಪ್ರಕಾರ ನಮ್ಮ ದೇಶದ ಜನರ ಅನಾರೋಗ್ಯ ದರ 106 ಇದೆ.

ಅಂದರೆ ನಮ್ಮ ಪ್ರತಿ ಸಾವಿರ ಜನಸಂಖ್ಯೆಯಲ್ಲಿ ಒಂದು ಗೊತ್ತಾದ ಕಾಲದಲ್ಲಿ ಸರಾಸರಿ 106 ಜನ ಒಂದಲ್ಲ ಒಂದು ಕಾಯಿಲೆಯಿಂದ ಬಳಲುತ್ತಿದ್ದಾರೆ ಎಂದು ಅರ್ಥ. ಬಡತನ, ಪರಿಸರ ಮಾಲಿನ್ಯ, ಪೌಷ್ಟಿಕ ಆಹಾರದ ಕೊರತೆ. ಆಧುನಿಕ ಆರೋಗ್ಯ ತಂತ್ರಜ್ಞಾನದ ಕೊರತೆ ಮೊದಲಾದ ಕಾರಣಗಳಿಂದ ನಮ್ಮ ದೇಶದಲ್ಲಿ ಅನಾರೋಗ್ಯ ದರ ಹೆಚ್ಚಿದೆ. ಯಾವ ದೇಶದಲ್ಲಿ ಅನಾರೋಗ್ಯ ದರ ಹೆಚ್ಚಿದೆಯೋ ಅಲ್ಲಿ ಮರಣ ದರ ಹೆಚ್ಚು. ಜನರ ಜೀವನಮಟ್ಟ ಕಡಿಮೆ ಜನನ ದರ ಹೆಚ್ಚು, ಮತ್ತು ಅದಕ್ಕೂ ಮುಖ್ಯವಾಗಿ ಜನರು ಕಾರ್ಯ ಮಾಡುವಕಾಲದ ಹಾನಿ ಹೆಚ್ಚಾಗುವುದು ಎಂದು ಹೇಳಬಹುದು

ತಾಯಿ ಮರಣ ದರ ; ಗರ್ಭಧಾರಣ ದಿನದಿಂದ ಹಿಡಿದು ಪ್ರಸವ ವಾಗುವ ವರೆಗಿನ ಕಾಲ ಗರ್ಭಿಣಿ ಸ್ತ್ರೀಯರಿಗೆ ಅನೇಕ ಒತ್ತಡಗಳಿಂದ ಕೂಡಿದ ಕಠಿಣವಾದ ಮತ್ತು ಸೂಕ್ಷ್ಮವಾದ ಕಾಲ. ಈ ಅವಧಿಯಲ್ಲಿ ಗರ್ಭಿಣಿ ಸ್ತ್ರೀಯರಿಗೆ ಪೌಷ್ಟಿಕ ಆಹಾರದ ಪೂರೈಕೆ, ಕಾಲಕಾಲಕ್ಕೆ ವಿಶೇಷ ಆರೋಗ್ಯ ತಪಾಸಣೆ, ಔಷಧೋಪಚಾರ ಮುಂತಾದ ಸೌಕರ್ಯಗಳ ಅಗತ್ಯ ಹಿಂದಿಗಿಂತ ಮತ್ತು ಇತರ ಜನರಿಗಿಂತ ಅತಿ ಹೆಚ್ಚು, ಇವುಗಳ ಕೊರತೆಯಿಂದಾಗಿ ಅನೇಕ ಗರ್ಭಿಣಿ ಸ್ತ್ರೀಯರು ಪ್ರಸವ ಪೂರ್ವದಲ್ಲಿ ಅಥವಾ ಪ್ರಸವದ ನಂತರ ಮರಣ ಹೊಂದುವ ಸಂಭವ ಹೆಚ್ಚು,

ಒಂದು ಪ್ರದೇಶದಲ್ಲಿ ಒಂದು ನಿರ್ದಿಷ್ಟ ವರ್ಷದಲ್ಲಿ ಪ್ರತಿ ಸಾವಿರ ಸಜೀವ ಪ್ರಸವ ಸಂಖ್ಯೆಗೆ ಪ್ರಸವ ಪೂರ್ವ ಮತ್ತು ನಂತರದ ಅವಧಿಯಲ್ಲಿ ಪ್ರಸವದಿಂದಾಗಿ ಉಂಟಾದ ತಾಯಂದಿರ ಮರಣ. ಸಂಖ್ಯೆಗೆ ಮಾತೃ ಮರಣ ದರ ಎಂದು ಅನ್ನುವರು. ಮಾತೃ ಮರಣ ದರವನ್ನು ಈ ಕೆಳಗಿನ ಸೂತ್ರದ ಸಹಾಯದಿಂದ ಕಂಡು ಹಿಡಿಯಬಹುದು.

$$\text{ಮಾತೃ ಮರಣ ದರ} = \frac{\text{ಪ್ರ,ಮ}}{\text{ಪ್ರ.ಜ.}} \times 1,000$$

ಪ್ರ.ಮ— ಅಂದರೆ ಪ್ರಸವ ಪೂರ್ವದಲ್ಲಿ ಮತ್ತು ಪ್ರಸವವಾಗಿ 40 ದಿನಗಳ ಒಳಗೆ ಪ್ರಸವದಿಂದಾಗಿಯೇ ಉಂಟಾದ ತಾಯಂದಿರ ಮರಣಗಳ ಒಟ್ಟೂ ಸಂಖ್ಯೆ.

ಪ್ರ.ಜ— ಅಂದರೆ ಆ ಪ್ರದೇಶದಲ್ಲಿ ಆ ವರ್ಷದಲ್ಲಿ ಉಂಟಾದ ಸಜೀವ ಪ್ರಸವ ಗಳ ಒಟ್ಟೂ ಸಂಖ್ಯೆ.

ಮಾತೃ ಮರಣಕ್ಕೆ ಸಂಬಂಧಪಟ್ಟ ಅಂಕಿ ಅಂಶಗಳನ್ನು ಜನಗಣತಿಯ ಮೂಲಕ ಸಂಗ್ರಹಿಸದೇ ವಿಶಿಷ್ಟ ಆರೋಗ್ಯ ಸಮೀಕ್ಷೆಗಳ ಮೂಲಕ ಸಂಗ್ರಹಿಸಲಾಗುವುದು. ಒಂದು ಸಮೀಕ್ಷೆಯ ಅಂಧಾಜಿನಂತೆ ನಮ್ಮ ದೇಶದಲ್ಲಿ ಮಾತೃ ಮರಣ ದರ 4 ಆದರೆ ನಮ್ಮ ದೇಶದಲ್ಲಿ ಪ್ರತಿ ಸಾವಿರ ಸಜೀವ ಪ್ರಸವಗಳಲ್ಲಿ 4 ತಾಯಂದಿರು ಪ್ರಸವದಿಂದಾಗಿ ಮರಣ ಹೊಂದುತ್ತಾರೆ. ಈ ಅಂಕಿ ಅಂಶವನ್ನು ಮುಂದುವರಿದ ಪಾಶ್ಚಿಮಾತ್ಯ ದೇಶಗಳಿಗೆ ತುಲನೆ ಮಾಡಿದರೆ ಬಹಳ ಹೆಚ್ಚು. ಉದಾಹರಣೆ— ರಶಿಯಾದಲ್ಲಿ ಮತ್ತು ಸ್ವೀಡನ್‌ದಲ್ಲಿ ಮಾತೃ ಮರಣ ದರ ಸೊನ್ನೆ.

ಯಾವ ದೇಶದಲ್ಲಿ ಮಾತೃ ಮರಣ ದರ ಹೆಚ್ಚಿಗೆ ಇದೆಯೋ ಆ ದೇಶದಲ್ಲಿ ಜನನ ದರ ಹೆಚ್ಚಿಗೆ, ಎರಡು ಮಕ್ಕಳ ನಡುವಿನ ಅಂತರ ಕಡಿಮೆ, ಬಡತನ ಪ್ರಮಾಣ ಹೆಚ್ಚಿಗೆ. ಮತ್ತು ತಾಯಿ ಮಕ್ಕಳ ಆರೋಗ್ಯ ಕಾರ್ಯಕ್ರಮದ ಕೊರತೆ ಇರುವುದು ಕಂಡು ಬರುತ್ತದೆ.

**ವಲಸೆ :—**

ವಲಸೆಯು ಜನಸಂಖ್ಯಾ ಬದಲಾವಣೆಯನ್ನು ಉಂಟುಮಾಡುವ ಮೂರನೇಯ ಮುಖ್ಯ ಅಂಶವಾಗಿದೆ. ವಲಸೆಯು ಮೊದಲೆರಡು ಅಂಶಗಳಾದ ಜನನ ಮತ್ತು ಮರಣ ಗಳಂತೆ ಒಂದು ಜೈವಿಕ ಅಂಶ, ಅದು ಮಾನವರಿಗೆ ಮಾತ್ರ ಸೀಮಿತವಾಗಿರದೇ ಪ್ರಾಣಿ ಪಕ್ಷಿಗಳಲ್ಲೂ ಇರುವ ಅಂಶವಾಗಿದೆ. ಜನಸಂಖ್ಯಾ ಅಧ್ಯಯನದಲ್ಲಿ ವಲಸೆಯು ಅತ್ಯುತ್ತಮ ಸ್ಥಾನವನ್ನು ಗಳಿಸಿದೆ. ಏಕೆಂದರೆ ವಲಸೆಯು ಒಂದು ಸಮಾಜದಲ್ಲಿ ಮೂಲಭೂತ ಬದಲಾವಣೆಯನ್ನು ಉಂಟು ಮಾಡುತ್ತದೆ. ಈ ಅಂಶದಿಂದಲೇ ಕೈಗಾರೀಕರಣ, ನಗರೀ ಕರಣ, ಆರ್ಥಿಕ ಅಭಿವೃದ್ಧಿ ಮುಂತಾದ ಬದಲಾವಣೆಗಳು ನಡೆಯುತ್ತಿವೆ ಎಂದು ಹೇಳ ಬಹುದು.

ವಾಸಕ್ಕಾಗಿ ಒಂದು ನಿಶ್ಚಿತ ಪ್ರದೇಶದಿಂದ, ಜನರು ಇನ್ನೊಂದು ನಿಶ್ಚಿತ ಭೂಪ್ರದೇ ಶಕ್ಕೆ ಹೋಗಿ ನೆಲೆಸುವುದಕ್ಕೆ ವಲಸೆ ಅನ್ನುವರು. ಜನರು ಆಹಾರ. ವಸತಿ. ಉದ್ಯೋಗ ಭೌಗೋಲಿಕ ಪ್ರಕೋಪ, ಸಾಮಾಜಿಕ ರಾಜಕೀಯ ಕಾರಣಗಳಿಗಾಗಿ ಅಥವಾ ಇನ್ನಿತರ ಅಗತ್ಯಗಳಿಗಾಗಿ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ವಲಸೆ ಹೋಗುತ್ತಾರೆ.

ಒಂದು ನಿರ್ಧಿಷ್ಟ ಭೂ ಪ್ರದೇಶದಿಂದ ಇನ್ನೊಂದು ಭೂ ಪ್ರದೇಶಕ್ಕೆ ಮುಖ್ಯವಾಗಿ ರಾಜಕೀಯ ಗಡಿಗಳಾಚೆ ಜನರು ವಾಸಕ್ಕಾಗಿ ವಲಸೆ ಹೋದರೆ ಅದಕ್ಕೆ ಬಾಹ್ಯ ವಲಸೆ ಎಂದು ಅನ್ನುವರು. ಅಂತೆಯೇ ಒಂದು ನಿರ್ಧಿಷ್ಟ ಭೂ ಪ್ರದೇಶದಿಂದ ಮತ್ತೊಂದು ಭೂ ಪ್ರದೇಶದ ಒಳಕ್ಕೆ ಮುಖ್ಯವಾಗಿ ರಾಜಕೀಯ ಗಡಿಯೊಳಗೆ ಜನರು ವಾಸಕ್ಕಾಗಿ ಒಳಕ್ಕೆ ಬಂದರೆ ಅದಕ್ಕೆ ಒಳವಲಸೆ ಅಥವಾ ವಲಸೆ ಬರುವಿಕೆ ಎಂದು ಕರೆಯುತ್ತಾರೆ. ಉದಾಹರಣೆ:- ಭಾರತವನ್ನುಬಿಟ್ಟು ಅಮೇರಿಕಾಕ್ಕೆ ಹೋಗಿ ಅಲ್ಲಿ ನೆಲೆಸುವ ಜನರಿಂದ ಎರಡು ರೀತಿಯ ಚಲನೆಗಳು ಉಂಟಾಗುತ್ತವೆ. ಮೊದಲನೆಯದಾಗಿ ಭಾರತದ ದೃಷ್ಟಿಯಲ್ಲಿ ಇಲ್ಲಿಂದ ಹೋದ ಜನರಿಂದ ವಲಸೆ ಹೋಗುವಿಕೆ (ಬಾಹ್ಯ ವಲಸೆ) ಉಂಟಾಯಿತು. ಎರಡನೆಯದಾಗಿ ಅಮೇರಿಕೆಯ ದೃಷ್ಟಿಯಿಂದ ಭಾರತದಿಂದ ಹೋದ ಜನರಿಂದಲೇ ವಲಸೆ ಬರುವಿಕೆ (ಒಳ ವಲಸೆ) ಉಂಟಾಯಿತು. ಇದನ್ನು ಅಂತರ್ ರಾಷ್ಟ್ರೀಯ ವಲಸೆ ಎಂದೂ ಕರೆಯಬಹುದು.

ಇದಲ್ಲದೆ ಒಳವಲಸೆ ಮತ್ತು ಹೊರವಲಸೆ ಚಲನೆಗಳು ಒಂದು ದೇಶದ ರಾಜಕೀಯ ಗಡಿಯೊಳಗೇ ಅಂತರಿಕವಾಗಿ ನಡೆಯಬಹುದು. ಉದಾಹರಣೆ:- ಆಂಧ್ರ ಪ್ರದೇಶದಿಂದ ಜನರು ಕರ್ನಾಟಕಕ್ಕೆ ನೆಲೆಸಲು ಬಂದರೆ ಕರ್ನಾಟಕಕ್ಕೆ ಒಳವಲಸೆ ಬಂದರೆಂತಲೂ, ಆಂಧ್ರ ಪ್ರದೇಶದ ದೃಷ್ಟಿಯಿಂದ ಹೊರವಲಸೆ ಉಂಟಾಯಿತೆಂದು ಹೇಳಬಹುದು,

**ಚಲನೆ ಮತ್ತು ವಲಸೆ :-**

ಜನರು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಚಲಿಸುವುದು ಸಹಜವಾದ ಕ್ರಿಯೆ. ಇದು ಕೆಲವಾರು ಕಿಲೋಮೀಟರುಗಳಿಂದ ಹಿಡಿದು ಸಾವಿರಾರು ಕಿ.ಮೀ.ಗಳವರೆಗೆ ಸಂಭವಿಸಬಹುದು. ಹೀಗೆ ಚಲಿಸುವ ವ್ಯಕ್ತಿಗಳು ಕೆಲವಾರು ಘಂಟೆಗಳಿಂದ ಹಿಡಿದು ಹಲವಾರು ವರ್ಷಗಳವರೆಗೆ ತಂಗಬಹುದು. ಉದಾಹರಣೆ:- ವ್ಯಾಪಾರ, ಉದ್ಯೋಗ, ವಿಹಾರಾರ್ಥವಾಗಿ ಜನಗಳು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಚಲಿಸುತ್ತಿರುತ್ತಾರೆ ಆದರೆ ಎಲ್ಲ ಚಲನೆಗಳು ಮುಖ್ಯವಾಗಿ ಮೂಲಭೂತವಾದ ವಾಸಸ್ಥಾನಗಳ ಮೇಲೆ ಯಾವ ಪರಿಣಾಮವನ್ನೂ ಬೀರುವುದಿಲ್ಲ. ಆದ್ದರಿಂದ ಇಂತಹ ಜನರ ಚಲನೆಗಳನ್ನು ತಾತ್ಕಾಲಿಕ ಚಲನೆಗಳು ಎಂದು ಕರೆಯಬಹುದೇ ಹೊರತು ವಲಸೆ ಎಂದು ಕರೆಯಲಾಗುವುದಿಲ್ಲ. ಆದುದರಿಂದ ಒಂದು ಹೊಸ ಪ್ರದೇಶದಲ್ಲಿ ಸಂಪೂರ್ಣವಾದ ಹೊಸ ವಾಸವನ್ನು ಪ್ರಾರಂಭಿಸುವ ಶಾಶ್ವತ ವಿಧಾನವನ್ನು ವಲಸೆ ಎಂದು ಕರೆಯಬಹುದು. ಒಂದು ಹಳ್ಳಿಯಲ್ಲಿ ವಾಸವಾಗಿದ್ದ ಜನರು ನಗರಕ್ಕೆ ಬಂದು ಶಾಶ್ವತವಾಗಿ ವಾಸಿಸಿದರೆ ಇದು ವಲಸೆ

ಎಂದು ಎನಿಸಿಕೊಳ್ಳುವುದು. ಆದರೆ ನಗರ ಅಥವಾ ಒಂದು ಹಳ್ಳಿಯ ಒಳಗೇ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ವಾಸಸ್ಥಾನಗಳನ್ನು ಬದಲಾಯಿಸುವ ಕ್ರಮವಾಗಲೀ ಅಥವಾ ಬರದೇ ಕಟ್ಟಡದಲ್ಲಿ ವಾಸಿಸುವ ಜಾಗವನ್ನು ಬದಲಾಯಿಸುವುದಾಗಲೀ ವಲಸೆ ಎಂದು ಕರೆಯಲು ಸಾಧ್ಯವಿಲ್ಲ.

ಒಳವಲಸೆ ಮತ್ತು ಹೊರ ವಲಸೆ ಒಂದಕ್ಕೊಂದು ಪೂರಕ. ಒಳವಲಸೆಯಿಂದ ಒಂದು ಪ್ರದೇಶದ ಜನಸಂಖ್ಯೆ ಹೆಚ್ಚಾಗುತ್ತದೆ. ಮತ್ತು ಹೊರ ವಲಸೆಯಿಂದ ಒಂದು ಜನಸಂಖ್ಯೆ ಕಡಿಮೆ ಆಗುತ್ತದೆ, ವಲಸೆಯಿಂದ ಒಂದು ಪ್ರದೇಶದಲ್ಲಿಯ ಪ್ರದೇಶದ ಜನ ಸಂಖ್ಯೆಯ ಏರಿಕೆ ಅಥವಾ ಇಳಿಕೆಯನ್ನು ಈ ಕೆಳಗಿನಂತೆ ನಿಕ್ಕಿ ವಲಸೆ (ನಿವ್ವಳ ವಲಸೆ) ರೂಪದಲ್ಲಿ ತಿಳಿದು ಕೊಳ್ಳಬಹುದು.

ನಿವ್ವಳ ವಲಸೆ = (ಪ್ರ.ಪು) — (ಜ - ಮ)

ಪ್ರ ಅಂದರೆ ಒಂದು ಪ್ರದೇಕಶದಲ್ಲಿ ಪ್ರಸಕ್ತ ವರ್ಷದ ಒಟ್ಟು ಜನಸಂಖ್ಯೆ

ಪು ಅಂದರೆ ಹಿಂದಿನ ವರ್ಷದಲ್ಲಿ ಆ ಪ್ರದೇಶದಲ್ಲಿ ಇದ್ದ ಒಟ್ಟೂ ಜನಸಂಖ್ಯೆ

ಜ ಅಂದರೆ ಆ ಅವಧಿಯಲ್ಲಿ ಜನಿಸಿದ ಮಕ್ಕಳ ಸಂಖ್ಯೆ

ಮ ಅಂದರೆ ಕಾಲ ಮತ್ತು ಅದೇ ಪ್ರದೇಶದಲ್ಲಿ ಸಂಭವಿಸಿದ ಒಟ್ಟೂ ಮರಣ ಸಂಖ್ಯೆ.

ಇನ್ನೊಂದು ವಿಧದಲ್ಲಿ ಹೇಳುವುದಾದರೆ ಒಂದು ಪ್ರದೇಶದ ಒಟ್ಟೂ ಜನಸಂಖ್ಯೆ ಹೆಚ್ಚಳದಲ್ಲಿ ನಿವ್ವಳ ಜನಸಂಖ್ಯಾ ಹೆಚ್ಚಳ(ಜನನ-ಮರಣ) ವನ್ನೂ ಕಳೆದರೆ ಉಳಿಯುವುದೇ ನಿವ್ವಳ ವಲಸೆ.

**ಜನಸಂಖ್ಯಾ ಬೆಳವಣಿಗೆ ದರ**

ಜನಸಂಖ್ಯಾ ಬೆಳವಣಿಗೆ ದರವು ಜನನ ದರ, ಮರಣ ದರ ಮತ್ತು ವಲಸೆ ಈ ಮೂರು ಸಂಗತಿಗಳನ್ನೂ ಅವಲಂಬಿಸಿದೆ. ಒಂದು ಪ್ರದೇಶದ ನಿರ್ಧಿಷ್ಟ ಕಾಲದಲ್ಲಿಯ ಜನನ ದರ ಮತ್ತು ಮರಣ ದರಗಳ ಅಂತರಗಳನ್ನು ಸ್ವಾಭಾವಿಕ ಜನಸಂಖ್ಯಾ ಏರಿಕೆಯ ದರ ಎಂದು ಅನ್ನಬಹುದು.

ಸ್ವಾಭಾವಿಕ ಜನಸಂಖ್ಯಾ ಏರಿಕೆಯು ದರ = ಜನನ ದರ - ಮರಣ ದರ ಕ್ರಿ. ಶ. 1981ರ ಜನಗಣತಿಯು ಪ್ರಕಾರ ನಮ್ಮ ದೇಶದಲ್ಲಿ ಜನನ ದರ ಪ್ರತಿ ಸಾವಿರಕ್ಕೆ ಪ್ರತಿ ವರ್ಷ 36 ಇತ್ತು. ಮತ್ತು ಮರಣ ದರ 14.8 ಇತ್ತು. ಆದ್ದರಿಂದ 1971—81ರ ದಶಕದಲ್ಲಿ ಭಾರತದ ಸ್ವಾಭಾವಿಕ ಜನಸಂಖ್ಯಾ ವೃದ್ಧಿ ದರ = 36 — 14.8

= 21.2

ಅಂದರೆ ಭಾರತದ ಜನಸಂಖ್ಯೆ 1971–81ರ ದಶಕದಲ್ಲಿ ಪ್ರತಿ ಸಾವಿರದ ಜನ ಸಂಖ್ಯೆಗೆ ಪ್ರತಿ ವರ್ಷ 21.2ರಂತೆ ಏರುತ್ತಿದೆ ಅಥವಾ ಜನಸಂಖ್ಯಾ ಏರಿಕೆ ಶೇಕಡಾ 2.12.

ಒಂದು ವೇಳೆ ಒಂದು ಪ್ರದೇಶದ ಜನಸಂಖ್ಯೆಯು ಜನನ ದರ ಮತ್ತು ಮರಣ ದರಗಳು ಸಮವಾಗಿದ್ದರೆ ಆಗ ಸ್ವಾಭಾವಿಕ ಜನಸಂಖ್ಯಾ ವೃದ್ಧಿಯು ದರ ಶೂನ್ಯ (Zero) ಇದಕ್ಕೆ ಶೂನ್ಯ ಜನಸಂಖ್ಯಾ ವೃದ್ಧಿ ಎಂದು ಅನ್ನುವರು. ಶೂನ್ಯ ಜನಸಂಖ್ಯಾ ವೃದ್ಧಿ ದರ ಇರುವ ಪ್ರದೇಶದ ಜನಸಂಖ್ಯೆ ಏರುವುದೂ ಇಲ್ಲ. ಇಳಿಯುವುದೂ ಇಲ್ಲ. ಅದು ವರ್ಷದಿಂದ ವರ್ಷಕ್ಕೆ ಸ್ಥಿರವಾಗಿರುವುದು,

ಒಂದು ವೇಳೆ ಒಂದು ಪ್ರದೇಶದ ಮರಣ ದರವು ಜನನ ದರಕ್ಕಿಂತ ಹೆಚ್ಚಿಗೆ ಇದ್ದರೆ ಜನನ ದರ ಮತ್ತು ಮರಣ ದರಗಳ ಅಂತರವು ಋಣವಾಗುವುದು ಅಂದರೆ ಇದು ಜನಸಂಖ್ಯಾ ಇಳಿಕೆ ದರವನ್ನು ಸೂಚಿಸುತ್ತದೆ. ಉದಾಹರಣೆ ಕ್ರಿ. ಶ. 1979-80ರಲ್ಲಿ ಪಶ್ಚಿಮ ಜರ್ಮನಿಯು ಜನಸಂಖ್ಯೆಯು ಜನನ ದರವು ಮರಣ ದರಕ್ಕಿಂತ ಕಡಿಮೆ ಇದ್ದುದ ರಿಂದ ಜನಸಂಖ್ಯೆ ಪ್ರತಿ ಸಾವಿರಕ್ಕೆ ಪ್ರತಿ ವರ್ಷ 2 ದರದಲ್ಲಿ ಇಳಿಯುತ್ತಿದೆ. 1911-21ರ ದಶಕದಲ್ಲಿ ಭಾರತದಲ್ಲಿ ಸಾಂಕ್ರಾಮಿಕ ರೋಗ ರುಜಿನ ಮತ್ತು ನೈಸರ್ಗಿಕ ಪ್ರಕೋಪ ಗಳಿಂದಾಗಿ ಮರಣ ದರವು ಜನನ ದರಕ್ಕಿಂತ ಹೆಚ್ಚಿಗೆ ಇತ್ತು. ಮತ್ತು ಆ ದಶಕದಲ್ಲಿ ಜನ ಸಂಖ್ಯೆ ವೃದ್ಧಿ ಇಳಿಮುಖವಾಗಿತ್ತು.

ಒಟ್ಟು ಜನಸಂಖ್ಯಾ ಏರಿಕೆ ದರವು (Total growth rate of Population) ಸ್ವಾಭಾವಿಕ ಜನಸಂಖ್ಯಾ ಏರಿಕೆ ದರಕ್ಕಿಂತ ಸ್ವಲ್ಪ ಹೆಚ್ಚು ಅಥವಾ ಕಡಿಮೆ ಇರ ಬಹುದು ಯಾಕಂದರೆ ಒಂದು ದೇಶದ ಒಟ್ಟು ಜನಸಂಖ್ಯಾ ಏರಿಕೆಯು ದರವು ಜನನ ದರ ಮರಣ ದರ ಮತ್ತು ವಲಸೆಯನ್ನು ಅವಲಂಬಿಸಿದೆ.

ಒಟ್ಟೂ ಜನಸಂಖ್ಯಾ ಏರಿಕೆಯ ದರವು (ಜನನ ದರ-ಮರಣದರ) ಸಿಕ್ಕಿ ವಲಸೆ ಕ್ರಿ. ಶ, 1981ರ ಜನಗಣತಿಯ ಪ್ರಕಾರ ನಮ್ಮ ದೇಶದ ಜನಸಂಖ್ಯೆಯು ಒಟ್ಟೂ ಜನಸಂಖ್ಯಾ ಏರಿಕೆ ದರ 24.75 ಇತ್ತು. ಅಂದರೆ ಪ್ರತಿಶತ 2.5.

ಸ್ವಾಭಾವಿಕ ಜನಸಂಖ್ಯಾ ವೃದ್ಧಿ ದರವು ನಮಗೆ ದೇಶದ ಜನಸಂಖ್ಯೆ ಮುಂದಿನ ವರ್ಷಗಳಲ್ಲಿ ಎಷ್ಟಾಗುವುದು. ಜನಸಂಖ್ಯೆಯು ಗಾತ್ರ ಮುಂದಿನ ಯಾವ ಯಾವ ವರ್ಷಗಳಲ್ಲಿ ಎಷ್ಟು ಎಂದು ತಿಳಿದುಕೊಳ್ಳಲು ಸಹಾಯುವಾಗುವುದು. ಉದಾಹರಣೆ : ಒಂದು ದೇಶದ ಜನಸಂಖ್ಯಾ ವೃದ್ಧಿ ದರವು ಶೇಕಡಾ 1.0ದರದಲ್ಲಿ ಇದ್ದರೆ ಆ ದೇಶದ ಜನಸಂಖ್ಯೆ ಮುಂದಿನ 70 ವರ್ಷಗಳಲ್ಲಿ ದ್ವಿಗುಣಗೊಳ್ಳುವುದು. ಯಾಕಂದರೆ ಜನಸಂಖ್ಯೆಯು ಚಕ್ರ ಬಡ್ಡಿಯ ತತ್ವದ ಪ್ರಕಾರ ಏರುತ್ತದೆ. ಉದಾಹರಣೆ-ಒಂದು ಪ್ರದೇಶದ ಜನಸಂಖ್ಯೆ ಒಂದು ನಿರ್ಧಿಷ್ಟ ವರ್ಷದಲ್ಲಿ 1000 ಇದೆ ಮತ್ತು ಆ ಪ್ರದೇಶದ ಜನಸಂಖ್ಯಾ ವೃದ್ಧಿ ದರ ಪ್ರತಿಶತ 1.0 ಎಂದು ತಿಳಿದರೆ, ಒಂದು ವರ್ಷದ ಕೊನೆಗೆ ಆ ಪ್ರದೇಶದ ಜನಸಂಖ್ಯೆ 1010 ಆಗುವುದು. ಎರಡನೇ ವರ್ಷದ ಕೊನೆಗೆ ಅಲ್ಲಿಯ ಜನಸಂಖ್ಯೆ 1020.10 ಮತ್ತು ಮೂರನೇಯ ವರ್ಷದ ಕೊನೆಗೆ ಅಲ್ಲಿಯ ಜನಸಂಖ್ಯೆ 1030.301ಕ್ಕೆ ಏರುವುದು. ಹೀಗೆ ಜನಸಂಖ್ಯೆ ಏರುತ್ತ ಹೋಗಿ 70ನೇ ವರ್ಷದ ಕೊನೆಗೆ ಅಲ್ಲಿಯ ಒಟ್ಟೂ ಜನಸಂಖ್ಯೆ 2000 ವನ್ನು ದಾಟುವುದು. ಅಂದರೆ ದ್ವಿಗುಣ (Double) ಆಗುವುದು ಎಂಬುದು ಸರಳ ಲೆಕ್ಕಾಚಾರದಿಂದ ತಿಳಿದು ಬರುವುದು.

ಒಂದು ಪ್ರದೇಶದ ಜನಸಂಖ್ಯಾ ವೃದ್ಧಿ ದರ ಶೇಕಡಾ 2.0 ಇದ್ದರೆ ಜನಸಂಖ್ಯೆ ದ್ವಿಗುಣಗೊಳ್ಳಲು ತೆಗೆದುಕೊಳ್ಳುವ ಕಾಲ 35 ವರ್ಷ ಎಂದು ಹೇಳಬಹುದು. ಒಂದು ಪ್ರದೇಶದ ಜನಸಂಖ್ಯೆ ದ್ವಿಗುಣಗೊಳ್ಳಲು ತೆಗೆದುಕೊಳ್ಳುವ ಕಾಲವನ್ನು ಈ ಕೆಳಗಿನ ಸೂತ್ರದ ಸಹಾಯದಿಂದ ಕಂಡುಕೊಳ್ಳಬಹುದು.

$$\text{ಜನಸಂಖ್ಯೆ ದ್ವಿಗುಣಗೊಳ್ಳಲು ತೆಗೆದುಕೊಳ್ಳುವ ಕಾಲ} = \frac{70}{\text{ಜನಸಂಖ್ಯಾ ವೃದ್ಧಿ ದರ}}$$

ಜನಸಂಖ್ಯಾ ವೃದ್ಧಿ ದರಕ್ಕೆ ಅನುಗುಣವಾಗಿ ಜನಸಂಖ್ಯೆ ದ್ವಿಗುಣಗೊಳ್ಳಲು ತೆಗೆದು ಕೊಳ್ಳುವ ಕಾಲದ ಪಟ್ಟಿಯನ್ನು ಈ ಕೆಳಗೆ ಕೊಟ್ಟಿದೆ.

| ವಾರ್ಷಿಕ ಜನಸಂಖ್ಯಾ ಏರಿಕೆ ದರ (ಶೇಕಡಾ ದರ) | ಜನಸಂಖ್ಯೆ ದ್ವಿಗುಣಗೊಳ್ಳಲು ತೆಗೆದು ಕೊಳ್ಳುವ ಕಾಲ ವರ್ಷಗಳ ಸಂಖ್ಯೆಯಲ್ಲಿ |
|---|---|
| 3.0 | 24 |
| 2.5 | 29 |
| 2.0 | 35 |
| 1.5 | 47 |
| 1.0 | 70 |
| 0.5 | 140 |
| 0.2 | 350 |

ಕ್ರಿ. ಶ. 1981ರ ಜನಗಣತಿಯ ಪ್ರಕಾರ ಭಾರತದ ಜನಸಂಖ್ಯೆಯ ಏರಿಕೆಯ ದರ ಸುಮಾರು ಶೇಕಡಾ 2.5 ಪ್ರತಿವರ್ಷ ನಮ್ಮ ಜನಸಂಖ್ಯೆ ಇದೇ ದರದಲ್ಲಿ ಏರುತ್ತಿದ್ದರೆ ಮುಂದಿನ 29 ವರ್ಷಗಳಲ್ಲಿ ನಮ್ಮ ಜನಸಂಖ್ಯೆ ದ್ವಿಗುಣಗೊಳ್ಳುವುದು ಅಂದರೆ ಈಗ ಕ್ರಿ.ಶ. 1981ರಲ್ಲಿ ಜನಸಂಖ್ಯೆ 68.5 ಕೋಟಿ ಇದ್ದುದು ಕ್ರಿ.ಶ. 2010ರ ವೇಳೆಗೆ 137 ಕೋಟಿ ಆಗುವುದು ನಿರ್ವಿವಾದವಾಗಿದೆ.

ಜನಸಾಂದ್ರತೆ: (Density of Population) ಒಂದು ಚದುರ ಕಿಲೋಮೀಟರ ಪ್ರದೇಶದಲ್ಲಿ ಒಂದು ನಿರ್ದಿಷ್ಟ ಕಾಲದಲ್ಲಿ ವಾಸವಾಗಿರುವ ಜನರ ಒಟ್ಟು ಸಂಖ್ಯೆಗೆ ಆ ಪ್ರದೇಶದ ಜನಸಾಂದ್ರತೆ ಅನ್ನುವರು.

ಕ್ರಿ.ಶ. 1981ರ ಪ್ರಕಾರ ಭಾರತದ ಜನಸಾಂದ್ರತೆ 221 ಅಂದರೆ 1981ರ ವೇಳೆಯಲ್ಲಿ ಭಾರತದ ಸೀಮಾರೇಖೆಯ ಒಳಗೆ ಪ್ರತಿ ಚದುರ ಕಿಲೋಮೀಟರ್ ಭೂ ಪ್ರದೇಶದಲ್ಲಿ ಸರಾಸರಿ 221 ಜನರು ವಾಸವಾಗಿದ್ದರು ಎಂದು ಅರ್ಥ. ಒಂದು ಪ್ರದೇಶದ ಜನಸಾಂದ್ರತೆಯನ್ನು ಈ ಕೆಳಗಿನ ಸೂತ್ರವನ್ನು ಉಪಯೋಗಿಸಿ ಕಂಡು ಹಿಡಿಯಬಹುದು.

$$\text{ಜನಸಾಂದ್ರತೆ} = \frac{\text{ಒಂದು ಪ್ರದೇಶದಲ್ಲಿ ವಾಸವಾಗಿರುವ ಒಟ್ಟೂ ಜನರ ಸಂಖ್ಯೆ}}{\text{ಆ ಪ್ರದೇಶದ ಒಟ್ಟೂ ಕ್ಷೇತ್ರ (ಚೆದುರ ಕಿ.ಮೀ.ಗಳಲ್ಲಿ)}}$$

ಸಾಮಾನ್ಯವಾಗಿ ಒಂದು ದೇಶದ ಭೂ ಪ್ರದೇಶದ ಕ್ಷೇತ್ರ ಸೀಮಿತವಾಗಿರುವುದರಿಂದ ಆ ದೇಶದಲ್ಲಿ ಜನಸಂಖ್ಯೆ ಏರಿದಂತೆ ಜನಸಾಂದ್ರತೆಯೂ ಏರುತ್ತದೆ ಮತ್ತು ಜನಸಂಖ್ಯೆ ಇಳಿದಂತೆ ಜನಸಾಂದ್ರತೆ ಇಳಿಯುತ್ತದೆ.

ಕ್ರಿ. ಶ. 1921ರಲ್ಲಿ ಭಾರತದ ಜನಸಾಂದ್ರತೆ ಪ್ರತಿ ಚ. ಕಿ ಮಿಂ ಗೆ 80 ಇತ್ತು. ಈಗ ಕಿ. ಶ. 1981ರ ಜನಗಣತಿಯ ಪ್ರಕಾರ ಭಾರತದ ಜನಸಾಂದ್ರತೆ 221ಕ್ಕೆ ಏರಿದೆ. ಇಪ್ಪತ್ತನೇ ಶತಮಾನದ ಕೊನೆಯಲ್ಲಿ ನಮ್ಮ ದೇಶದ ಜನಸಾಂದ್ರತೆ 400ರ ಗಡಿಯನ್ನೂ ದಾಟಬಹುದೆಂದು ತಜ್ಞರು ಅಂದಾಜು ಮಾಡಿದ್ದಾರೆ.

ಜನಸಾಂದ್ರತೆಯು ಎಲ್ಲಾ ಪ್ರದೇಶಗಳಲ್ಲಿ ಒಂದೇ ತರನಾಗಿ ಇರುವುದಿಲ್ಲ. ನಗರ ಪ್ರದೇಶಗಳಲ್ಲಿ ಜನಸಾಂದ್ರತೆ ಹೆಚ್ಚು. ಗ್ರಾಮಾಂತರ ಪ್ರದೇಶಗಳಲ್ಲಿ ಜನಸಾಂದ್ರತೆ ಕಡಿಮೆ. ಜನಸಾಂದ್ರತೆಯು ಒಂದು ಭೂ ಪ್ರದೇಶದ ಭೌಗೋಲಿಕ ಸಂಗತಿ. ಸಂಪನ್ಮೂಲ ಲಭ್ಯತೆ, ಉದ್ಯೋಗದ ಅವಕಾಶ. ಸಂಪರ್ಕ ಸಾಧನ ಸೌಲಭ್ಯ, ಜನಸಂಖ್ಯಾ ವೃದ್ಧಿ ದರ ಮೊದಲಾದ ಅನೇಕ ಸಂಗತಿಗಳನ್ನು ಅವಲಂಬಿಸಿರುತ್ತದೆ.

**ಜನಸಂಖ್ಯಾ ರಚನೆಯ ಅರ್ಥ :**

ಜನಸಂಖ್ಯೆಯ ಲಕ್ಷಣಗಳ ಕ್ರಮಬದ್ಧ ಅಭ್ಯಾಸಕ್ಕೆ ಜನಸಂಖ್ಯೆಯ ರಚನೆಯ ಅಭ್ಯಾಸ ಎಂದು ಅನ್ನಬಹುದು. ಯಾವುದೇ ಒಂದು ಪ್ರದೇಶದ ಜನಸಂಖ್ಯೆಯಲ್ಲಿ ಜನ ದತ್ತ ಲಕ್ಷಣಗಳಾದ ವಯಸ್ಸು. ಲಿಂಗ. ಜನಾಂಗ. ಭಾಷೆ, ಧರ್ಮ ಜಾತಿಗಳಿಗೆ ಅನುಗುಣವಾಗಿ ಬೇರೆ ಬೇರೆ ಉಪ ಸಮೂಹಗಳು ಇರುತ್ತವೆ. ಮತ್ತು ಈ ಉಪಸಮೂಹಗಳ ಪ್ರಮಾಣ ಬೇರೆ ಬೇರೆ ಯಾಗಿರಬಹುದು. ಉದಾಹರಣೆ : ಲಿಂಗದ ಆಧಾರದ ಮೇಲೆ ಇಡೀ ಜನಸಂಖ್ಯೆಯನ್ನು ಸ್ತ್ರೀಯರು ಮತ್ತು ಪುರುಷರು ಎಂಬ ಎರಡು ಸಮೂಹಗಳಾಗಿ ವಿಂಗಡಿಸಬಹುದು. ವಯಸ್ಸಿನ ಆಧಾರದ ಮೇಲೆ ಒಟ್ಟೂ ಜನಸಂಖ್ಯೆಯನ್ನು ಮೂರು ಅಥವಾ ನಾಲ್ಕು ಸಮೂಹ (ಅ) 15 ವರ್ಷಕ್ಕಿಂತ ಕಡಿಮೆ ವಯಸ್ಸಿನವರು (ಬ) 15ರಿಂದ 45 ವಯಸ್ಸಿನವರು (ಕ) 45ರಿಂದ 60 ವರ್ಷ ವಯಸ್ಸಿನವರು (ಡ) 60 ವರ್ಷಕ್ಕಿಂತ

ಹೆಚ್ಚು ವಯಸ್ಸಿನವರು, ಹೀಗೆ ವರ್ಗೀಕರಿಸಬಹುದು, ಇದೇ ರೀತಿ ಸಾಮಾಜಿಕ ಲಕ್ಷಣಗಳಾದ ಶಿಕ್ಷಣ, ಉದ್ಯೋಗ, ವೈವಾಹಿಕ ಸ್ಥಿತಿಗಳ ಆಧಾರದ ಮೇಲೆ ಒಟ್ಟೂ ಜನಸಂಖ್ಯೆಯನ್ನು ವಿವಿಧ ಸಮೂಹಗಳನ್ನಾಗಿ ವರ್ಗೀಕರಿಸಬಹುದು. ಉದಾ— ಶಿಕ್ಷಿತರು ಮತ್ತು ಅಶಿಕ್ಷಿತರು, ಮತ್ತು ವಿವಾಹಿತರು, ಅವಿವಾಹಿತರು ಎಂದು ಒಟ್ಟೂ ಜನಸಂಖ್ಯೆಯುನ್ನು ವರ್ಗೀಕರಿಸಬಹುದು, ಈ ಉಪ ಜನಸಮೂಹಗಳು ಒಟ್ಟು ಜನಸಂಖ್ಯೆಯಲ್ಲಿ ಯಾವ ಯಾವ ಪ್ರಮಾಣದಲ್ಲಿ ಇವೆ ಹೇಗೆ ಒಂದಕ್ಕೊಂದು ವ್ಯತ್ಯಾಸ ಹೊಂದುತ್ತವೆ ಎಂಬುದನ್ನು ತಿಳಿಯುವುದೇ ಜನಸಂಖ್ಯಾ ರಚನೆ ಸ್ತ್ರೀ—ಪುರುಷ ಪ್ರಮಾಣ : (Sex Ratio) ಒಂದು ಪ್ರದೇಶದಲ್ಲಿ ಒಂದು ನಿರ್ಧಿಷ್ಟ ಕಾಲದಲ್ಲಿ ಪ್ರತಿ ಸಾವಿರ ಪುರುಷ ಸಂಖ್ಯೆಗೆ ಎಷ್ಟು ಸ್ತ್ರೀಯರ ಸಂಖ್ಯೆ ಇದೆಯೋ ಅದೇ ಆ ಜನಸಂಖ್ಯೆಯ ಸ್ತ್ರೀ-ಪುರುಷ ಸಂಖ್ಯಾ ಪ್ರಮಾಣ ಎಂದು ಅನ್ನುವರು. ಸ್ತ್ರೀ–ಪುರುಷ ಸಂಖ್ಯಾ ಪ್ರಮಾಣವನ್ನು ಈ ಕೆಳಗಿನ ಸೂತ್ರದ ಸಹಾಯದಿಂದ ಕಂಡುಕೊಳ್ಳಬಹುದು.

$$\text{ಸ್ತ್ರೀ-ಪುರುಷರ ಸಂಖ್ಯಾ ಪ್ರಮಾಣ} = \frac{\text{ಒಂದು ಪ್ರದೇಶದ ಒಟ್ಟೂ ಸ್ತ್ರೀಯರ ಸಂಖ್ಯೆ}}{\text{ಆ ಪ್ರದೇಶದ ಪುರುಷರ ಸಂಖ್ಯೆ}} \times 1000$$

ಭಾರತದಲ್ಲಿ ಸ್ತ್ರೀ-ಪುರುಷರ ಸಂಖ್ಯಾ ಪ್ರಮಾಣವನ್ನು ಈ ವಿಧಾನದಿಂದಲೇ ಕಂಡು ಹಿಡಿಯುವರು, ಕ್ರಿ. ಶ. 1981ರ ಜನಗಣತಿಯ ಪ್ರಕಾರ ಭಾರತದಲ್ಲಿ ಸ್ತ್ರೀ-ಪುರುಷ ಸಂಖ್ಯಾ ಪ್ರಮಾಣ 935 ಇದೆ. ಅಂದರೆ ಭಾರತದಲ್ಲಿ ಪ್ರತಿ ಸಾವಿರ ಪುರುಷರ ಸಂಖ್ಯೆಗೆ ಸರಾಸರಿ 935 ಸ್ತ್ರೀಯರ ಸಂಖ್ಯೆ ಇದೆ ಎಂದು ಅರ್ಥ,

ಇನ್ನು ಕೆಲವು ದೇಶಗಳಲ್ಲಿ ಜನಸಂಖ್ಯೆಯ ಪ್ರತಿ ಸಾವಿರ ಸ್ತ್ರೀಯರಿಗೆ ಎಷ್ಟು ಪುರುಷರ ಸಂಖ್ಯೆ ಇದೆಯೋ ಅದೇ ಆ ಜನಸಂಖ್ಯೆಯ ಪುರುಷ-ಸ್ತ್ರೀ ಸಂಖ್ಯಾ ಪ್ರಮಾಣ

$$\text{ಪುರುಷ–ಸ್ತ್ರೀ ಸಂಖ್ಯಾ ಪ್ರಮಾಣ} = \frac{\text{ಪು}}{\text{ಸ್ತ್ರೀ}} \times 1000$$

ಪು — ಪುರುಷರ ಸಂಖ್ಯೆ

ಸ್ತ್ರೀ-ಸ್ತ್ರೀಯರ ಸಂಖ್ಯೆ.

ಅಮೇರಿಕಾ, ಇಂಗ್ಲಂಡ, ಜರ್ಮನಿ ಮೊದಲಾದ ಅನೇಕ ಪಾಶ್ಚಿಮಾತ್ಯ ದೇಶಗಳಲ್ಲಿ ಪುರುಷ-ಸ್ತ್ರೀ ಸಂಖ್ಯಾ ಪ್ರಮಾಣವನ್ನು ಈ ವಿಧಾನದಿಂದ ಕಂಡು ಹಿಡಿಯುತ್ತಾರೆ.

ಸ್ತ್ರೀ-ಪುರುಷ ಪ್ರಮಾಣವು 1000 ಇದ್ದರೆ ಆ ದೇಶದಲ್ಲಿ ಸ್ತ್ರೀ–ಪುರುಷರು ಸರಿ ಸರಿ ಸಂಖ್ಯೆಯಲ್ಲಿ ಇದ್ದಾರೆ ಮತ್ತು ಈ ದೃಷ್ಟಿಯಿಂದ ಒಂದು ಆದರ್ಶ ದೇಶ ಎನ್ನಬಹುದು ಸ್ತ್ರೀ–ಪುರುಷ ಪ್ರಮಾಣ 1000ಕ್ಕಿಂತ ಕಡಿಮೆ ಇದ್ದರೆ ಆ ದೇಶದಲ್ಲಿ ಸ್ತ್ರೀಯರ ಸಂಖ್ಯೆಗಿಂತ ಪುರುಷರ ಸಂಖ್ಯೆಯೇ ಹೆಚ್ಚು ಎಂದು ಅರ್ಥ. ಭಾರತದಲ್ಲಿ ಸ್ತ್ರೀ-ಪುರುಷ ಪ್ರಮಾಣ 935ಇದೆ. ಅಂದರೆ ನಮ್ಮಲ್ಲಿ ಸ್ತ್ರೀಯರ ಸಂಖ್ಯೆಗಿಂತ ಪುರುಷರ ಸಂಖ್ಯೆಯೇ ಹೆಚ್ಚು ಇದಕ್ಕೆ ಅನೇಕ ಕಾರಣಗಳು ಇವೆ. ಅವುಗಳಲ್ಲಿ ಮುಖ್ಯವಾಗಿ ಎರಡು ಕಾರಣಗಳನ್ನು ಹೇಳಬಹುದು (1) ಪುರುಷ ಪ್ರಧಾನ ಸಾಮಾಜಿಕ ರಚನೆ ಮತ್ತು ಸಂಬಂಧ (2) ಹೆಚ್ಚಿನ ಸ್ತ್ರೀ ಮರಣ ಮತ್ತು ಹೆಣ್ಣು ಶಿಶು ಮರಣ.

ಜರ್ಮನಿ, ಫ್ರಾನ್ಸ, ಪೋಲಂಡ್, ಮೊದಲಾದ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಸ್ತ್ರೀ-ಪುರುಷ ಪ್ರಮಾಣ 1000ಕ್ಕಿಂತ ಹೆಚ್ಚು. ಅಂದರೆ ಆ ದೇಶಗಳಲ್ಲಿ ಒಟ್ಟೂ ಪುರುಷರ ಸಂಖ್ಯೆಗಿಂತ ಸ್ತ್ರೀಯರ ಸಂಖ್ಯೆಯೇ ಹೆಚ್ಚು. ಇದಕ್ಕೆ ಅನೇಕ ಕಾರಣಗಳು ಇವೆ. ಮುಖ್ಯವಾಗಿ ಮೂರು ಕಾರಣಗಳನ್ನು ಕೊಡಬಹುದು. (1) ಸ್ತ್ರೀ ಪುರುಷರಲ್ಲಿ ಹೆಚ್ಚು ಸಮಾನತೆ (2) ಪುರುಷರ ಮರಣ ಪ್ರಮಾಣ ಹೆಚ್ಚು (3) ಪುರುಷರ ಹೊರ ವಲಸೆ.

ಸ್ತ್ರೀ-ಪುರುಷ ಪ್ರಮಾಣವು ಹಳ್ಳಿ ಮತ್ತು ನಗರಗಳಲ್ಲಿ ವ್ಯತ್ಯಾಸ ಹೊಂದುತ್ತದೆ. ಭಾರತದಲ್ಲಿ ಹಳ್ಳಿಗಳಿಗಿಂತ ನಗರಗಳಲ್ಲಿ ಸ್ತ್ರೀಪುರುಷ ಪ್ರಮಾಣ ಕಡಿಮೆ. (ಗ್ರಾಮೀಣ ಪ್ರದೇಶಗಳಲ್ಲಿ 963 ಮತ್ತು ನಗರ ಪ್ರದೇಶಗಳಲ್ಲಿ 845-(ಕ್ರಿ.ಶ. 1981ರ ಜನಗಣತಿಯ ಪ್ರಕಾರ) ಕೈಗಾರಿಕಾ ನಗರಗಳಲ್ಲಿ ಸ್ತ್ರೀ-ಪುರುಷ ಪ್ರಮಾಣವು ಇನ್ನೂ ಕಡಿಮೆ ಇದೆ.

ಒಂದು ಪ್ರದೇಶದ ಸ್ತ್ರೀ–ಪುರುಷ ಸಂಖ್ಯಾ ಪ್ರಮಾಣವು ಜನಸಂಖ್ಯಾ ಏರಿಕೆಯ ಮೇಲೆ ನೇರವಾದ ಪ್ರಭಾವ ಬೀರುವುದು. ಸಾಮಾನ್ಯವಾಗಿ ಇತರ ಅಂಶಗಳು ಸ್ಥಿರ ವಿದ್ದಾಗ, ಒಂದು ಜನಸಂಖ್ಯೆಯ ಸ್ತ್ರೀ-ಪುರುಷ ಸಂಖ್ಯಾ ಪ್ರಮಾಣವು ಹೆಚ್ಚಾದಂತೆ ಜನಸಂಖ್ಯಾ ವೃದ್ಧಿಯ ದರ ಹೆಚ್ಚಾಗುತ್ತದೆ.

**ವಯೋ ರಚನೆ** : (Age Composition) ಒಂದು ಪ್ರದೇಶದ ಜನಸಂಖ್ಯೆಯ ಸರಿಯಾದ ತಿಳುವಳಿಕೆಯಾಗಬೇಕಾದರೆ ಆ ಜನಸಂಖ್ಯೆಯ ಸ್ತ್ರೀ-ಪುರುಷ ಪ್ರಮಾಣ ಹೇಗೆ

ಮುಖ್ಯವಾದ ಅಂಶವೆನಿಸಿದೆಯೋ ಹಾಗೆಯೇ ವಯಸ್ಸು ಕೂಡ ಬಹಳ ಮುಖ್ಯ ಅಂಶ ವೆನಿಸಿದೆ. ವಯಸ್ಸನ್ನು ಆಧರಿಸಿದ ಜನಸಂಖ್ಯಾ ವಿಂಗಡಣೆಯು ಸಾಮಾಜಿಕವಾಗಿ ಆರ್ಥಿಕ ವಾಗಿ, ಮತ್ತು ರಾಜಕೀಯವಾಗಿ ಬಹಳ ಮಹತ್ವದ್ದು. ವಯೋ ರಚನೆಯು ಒಟ್ಟೂ ಜನಸಂಖ್ಯೆಯಲ್ಲಿ ಕೆಲಸದಲ್ಲಿ ಇರುವವರು, ಇಲ್ಲದವರು, ಸಾಕ್ಷರರು, ನಿರಕ್ಷರರು, ವಿವಾಹಿತರು, ಅವಿವಾಹಿತರು. ಸ್ವಾವಲಂಬಿಗಳು ಅವಲಂಬಿತರು ಮುಂತಾದವುಗಳನ್ನು ನಿರ್ಧರಿಸಲು ವಯೋ ವಿಂಗಡಣೆಯ ಅಭ್ಯಾಸ ಬಹು ಮುಖ್ಯವಾದದ್ದು,

ಸಾಮಾನ್ಯವಾಗಿ ಒಂದು ಪ್ರದೇಶದ ಜನಸಂಖ್ಯೆಯ ವಯೋಮಾನ ವಿಂಗಡಣೆಯನ್ನು ಆ ಜನಸಂಖ್ಯೆಯ ಮಧ್ಯ ವಯೋಮಾನದ (Medium Age) ಮೇಲಿಂದ ವಿವರಿಸಬಹುದು. ಒಂದು ಜನಸಂಖ್ಯೆಯ ಮಧ್ಯ ವಯೋಮಾನ ಅಂದರೆ ಒಟ್ಟೂ ಜನಸಂಖ್ಯೆಯ ಅರ್ಧ ಭಾಗದಷ್ಟು ಜನಸಂಖ್ಯೆ ಯಾವ ವಯೋಮಾನಕ್ಕಿಂತ ಹೆಚ್ಚು ವಯಸ್ಸಿನವರು ಮತ್ತು ಉಳಿದ ಅರ್ಧಜನಸಂಖ್ಯೆ ಯಾವ ವಯೋಮಾನಕ್ಕಿಂತ ಕಡಿಮೆ ವಯಸ್ಸಿನವರು ಇರುತ್ತಾರೋ ಆ ವಯಸ್ಸಿಗೆ ಆ ಜನಸಂಖ್ಯೆಯ ಮಧ್ಯ ವಯೋಮಾನ ಎಂದು ಅನ್ನುವರು. ಮಧ್ಯ ವಯೋಮಾನ ಇಡೀ ಜನನಸಂಖ್ಯೆಯ ಸರಿಯಾದ ಎರಡು ಭಾಗಗಳನ್ನಾಗಿ ಮಾಡುತ್ತಿದೆ. ಜನಸಂಖ್ಯೆಯ ಅರ್ಧದಷ್ಟು ಜನ ಮಧ್ಯ ವಯೋಮಾನಕ್ಕಿಂತ ಹೆಚ್ಚು ವಯಸ್ಸಿನವರು ಮತ್ತು ಉಳಿದ ಅರ್ಧ ಜನ ಮಧ್ಯವಯೋಮಾನಕ್ಕಿಂತ ಕಡಿಮೆ ವಯಸ್ಸಿನವರು ಇರುತ್ತಾರೆ, ಕ್ರಿ.ಶ, 1984ರ ಅಂದಾಜಿನ ಪ್ರಕಾರ 70 ಕೋಟಿ ಜನಸಂಖ್ಯೆ ಇರುವ ಭಾರತದ ಜನಸಂಖ್ಯೆಯ ಮಧ್ಯ ವಯೋಮಾನ 18 ವರ್ಷ ಅಂದರೆ ನಮ್ಮ ಒಟ್ಟೂ ಜನಸಂಖ್ಯೆಯ ಅರ್ಧದಷ್ಟು (35 ಕೋಟಿ) ಜನ 18 ವರ್ಷಕ್ಕಿಂತ ಹೆಚ್ಚು ವಯಸ್ಸಿನವರು ಮತ್ತು ಉಳಿದ ಅರ್ಧದಷ್ಟು (35) ಕೋಟಿ ಜನ 18 ವರ್ಷಕ್ಕಿಂತ ಕಡಿಮೆ ವಯಸ್ಸಿನವರು ಇದ್ದಾರೆ. ಭಾರತದ ಜನಸಂಖ್ಯೆಯ ಮಧ್ಯ ವಯೋಮಾನವನ್ನು ಉಳಿದ ಮುಂದುವರಿದ ದೇಶಗಳಾದ ಇಂಗ್ಲೆಂಡ್, ಫ್ರಾನ್ಸ್, ಅಮೇರಿಕಾ ಮೊದಲಾದ ದೇಶಗಳಿಗೆ ಹೋಲಿಸಿದರೆ ಬಹಳ ಕಿರಿಯದು (Young Population) ನಮ್ಮ ಜನಸಂಖ್ಯೆಯಲ್ಲಿ ಚಿಕ್ಕ ವಯಸ್ಸಿನವರ ಜನಸಂಖ್ಯೆ ಅತೀ ಹೆಚ್ಚು ಎಂಬುವದನ್ನು ಇದು ತೋರಿಸುತ್ತದೆ. ಮತ್ತು ಅಂತಹ ಜನಸಂಖ್ಯಾ ವಿರಿಕೆಯ ಸಾಧ್ಯತೆಯನ್ನೂ ಎತ್ತಿ ತೋರಿಸುತ್ತದೆ. ಒಂದು ದೇಶದ ಜನಸಂಖ್ಯೆಯ ಮಧ್ಯ ವಯೋಮಾನ ಹೆಚ್ಚಿದ್ದರೆ ಅಲ್ಲಿ ವೃದ್ಧರ ಜನ ಸಂಖ್ಯೆ ಹೆಚ್ಚಿಗೆ ಮತ್ತು ಎಳೆಯರ ಪ್ರಮಾಣ ಕಡಿಮೆ ಎಂಬುದು ತಿಳಿದು ಬರುವುದು. ಉದಾಹರಣೆ : ಇಂಗ್ಲೆಂಡದ ಜನಸಂಖ್ಯೆಯ ಮಧ್ಯ ವಯೋಮಾನ 36, ಅಂದರೆ ಅಲ್ಲಿಯ ಅರ್ಧದಷ್ಟು ಜನರು 36 ವಯಸ್ಸನ್ನೂ ದಾಟಿದ ಹಿರಿಯರು ಮತ್ತು ಉಳಿದ ಅರ್ಧ ಜನಸಂಖ್ಯೆ 36 ವಯಸ್ಸಿಗಿಂತ ಕಿರಿಯರು. ಯಾವ ದೇಶದಲ್ಲಿ ಜನನ ದರ ಕಡಿಮೆ ಮತ್ತು

ಮರಣ ದರ ಕಡಿಮೆ ಇದೆಯೋ ಆ ದೇಶದ ಜನಸಂಖ್ಯೆಯು ಮಧ್ಯ ವಯೋಮಾನ ಹೆಚ್ಚಿಗೆ ಇರುವುದು ಮತ್ತು ಅಲ್ಲಿ ಚಿಕ್ಕಮಕ್ಕಳ ಪ್ರಮಾಣ ಕಡಿಮೆ ಮತ್ತು ಜನಸಂಖ್ಯಾ ಏರಿಕೆ ದರ ಕಡಿಮೆ ಎಂಬುದನ್ನು ಸೂಚಿಸುತ್ತದೆ.

**ಜನಸಂಖ್ಯಾ ಗೋಪುರ :** (Population Pyramid) ಜನಸಂಖ್ಯೆಯು ವಯೋ ರಚನೆಯನ್ನು ಅನೇಕ ರೀತಿಯಲ್ಲಿ ವರ್ಗೀಕರಿಸಬಹುದು. ಅವುಗಳಲ್ಲಿ ಮುಖ್ಯ ವಾಗಿ ವಯಸ್ಸಿನ ಅಂಕಿ-ಅಂಶಗಳನ್ನು 0-4,5–9,10-14,15-19 ಹೀಗೆ ಐದು ವರ್ಷ ಗಳ ವಯೋಮಾನದಲ್ಲಿ ವರ್ಗೀಕರಿಸಬಹುದು. ಹೆಚ್ಚು ಪ್ರಚಲಿತ ವಿಧಾನ ಈ ವಿಧಾನದಿಂದ ಒಂದು ದೇಶದ ಜನಸಂಖ್ಯೆಯು ವಯೋರಚನೆಯ ವಿಂಗಡಣೆಯನ್ನು ಲಿಂಗ ಮತು ವಯ ಸ್ಸಿನ ಗುಂಪುಗಳಿಗನುಗುಣವಾಗಿ ರೇಖಾ ಚಿತ್ರದಲ್ಲಿ ನಮೂದಿಸಿದಾಗ ಉಂಟಾದ ಗೋಪು ರಾಕಾರದ ರೇಖಾಚಿತ್ರಕ್ಕೆ ಜನಸಂಖ್ಯಾ ಗೋಪುರ (Population Pyramid) ಅಥವಾ ಜನಸಂಖ್ಯೆಯ ಲಿಂಗ, ವಯಸ್ಸು ಗೋಪುರ (Age Sex Pyramid) ಎಂದು ಅನ್ನುವರು. ಪ್ರತಿ ಐದು ವರ್ಷದ ವಯೋವರ್ಗಗಳಿಗನುಗುಣವಾಗಿ ಒಂದೊಂದು ವರ್ಗದಲ್ಲೂ ಎಷ್ಟೆಷ್ಟು ಜನರಿದ್ದಾರೆ ಮತ್ತು ಶೇಕಡಾ ಪ್ರಮಾಣ ಎಷ್ಟಿದೆ ಎಂಬುದು ಜನ ಸಂಖ್ಯಾ ಗೋಪುರದಿಂದ ಸುಲಭವಾಗಿ ಕಂಡುಕೊಳ್ಳಬಹುದು, ಒಂದೇ ಗಾತ್ರದ ಎರಡು ಪ್ರದೇಶಗಳ ಜನಸಂಖ್ಯೆಯನ್ನು ಹೋಲಿಸುವಲ್ಲಿ ಅಥವಾ ಒಂದೇ ಪ್ರದೇಶದ ಜನಸಂಖ್ಯೆಯ ಬೇರೆ ಬೇರೆ ಕಾಲಗಳ ವಯಸ್ಸನ್ನು ಹೋಲಿಸುವಲ್ಲಿ ಅಥವಾ ವಿವಿಧ ದೇಶಗಳ ಜನಸಂಖ್ಯೆಯ ತುಲನಾತ್ಮಕ ಅಭ್ಯಾಸದಲ್ಲಿ ಈ ಜನಸಂಖ್ಯಾ ಗೋಪುರ ಬಹಳ ಸಹಾಯಕವಾಗುವುದು, ಉದಾಹರಣೆ—ಭಾರತದಲ್ಲಿ 0-4ವರ್ಷ ವಯೋ ವರ್ಗದಲ್ಲಿರುವವರ ಸಂಖ್ಯೆಯು ಅಮೇರಿಕಾ ಸಂಯುಕ್ತ ಸಂಸ್ಥಾನದ ಈ ವಯೋ ವರ್ಗದವರ ಸಂಖ್ಯೆಗಿಂತ ಎರಡು ಪಟ್ಟು ಹೆಚ್ಚಾಗಿದೆ, ಅಮೇರಿಕಾದಲ್ಲಿ 60 ವರ್ಷಕ್ಕಿಂತ ಹೆಚ್ಚು ವಯಸ್ಸಿವನರ ಸಂಖ್ಯೆಯು ಪ್ರಮಾಣವು ಭಾರತದ ಅದೇ ವಯಸ್ಸಿನವರಿಗಿಂತ ಮೂರು ಪಟ್ಟು ಹೆಚ್ಚಾಗಿದೆ. ಈ ವಿವರಣೆಯಿಂದ ಭಾರತದ ಜನಸಂಖ್ಯೆಯಲ್ಲಿ ಮಕ್ಕಳ ಸಂಖ್ಯೆಯೂ ಅಮೇರಿಕಾದ ಜನ ಸಂಖ್ಯೆ ಯಲ್ಲಿ ವಯಸ್ಸಾದವರು ಅಂದರೆ ವೃದ್ಧರ ಜನಸಂಖ್ಯೆಯು ಪ್ರಮಾಣವು ಹೆಚ್ಚೆಂಬುದು ಸ್ಪಷ್ಟ ವಾಗಿ ತಿಳಿದು ಬರುತ್ತದೆ,

**ವಿವಿಧ ಜನಸಂಖ್ಯಾ ಗೋಪುರಗಳು** :

ವಿವಿಧ ದೇಶಗಳ ಜನಸಂಖ್ಯಾ ಗೋಪುರದ ಆಕಾರದ ಮೇಲಿಂದ ಅವುಗಳನ್ನು ಕೆಳಗಿನಂತೆ ವರ್ಗೀಕರಿಸಬಹುದು.

1) ಹೆಚ್ಚು ಜನನ ದರ ಮತ್ತು ಹೆಚ್ಚು ಮರಣ ದರ ಇರುವ ಚೂಪು ಶಂಕು ವಿನಾಕಾರದ ಜನಸಂಖ್ಯಾ ಗೋಪುರ.

2) ಹೆಚ್ಚು ಜನನ ದರ ಮತ್ತು ಸುಮಾರು ಕಡಿಮೆ ಮರಣ ದರ ಇರುವ ಶಂಕು ವಿನ ಆಕಾರದ ಜನಸಂಖ್ಯಾ ಗೋಪುರ.

3) ಕಡಿಮೆ ಜನನ ದರ ಮತ್ತು ಕಡಿಮೆ ಮರಣ ದರ ಇರುವ ಹೆಚ್ಚು ಕಡಿಮೆ ಚೌಕಾಕಾರದ ಗೋಪುರ.

4) ಒಮ್ಮೆಗೆ ಜನನ ದರ ಇಳಿದ ಮತ್ತು ಕಡಿಮೆ ಮರಣ ದರ ಇರುವ ಕಿರೀಟಾ ಕಾರದ ಜನಸಂಖ್ಯಾ ಗೋಪುರ.



ಪ್ರತಿಯೊಂದು ಮಾದರಿಯ ಗೋಪುರವನ್ನು ಈ ಕೆಳಗಿನ ವಿವರಣೆಯೊಂದಿಗೆ ಕೊಟ್ಟಿದೆ.

## (1) ಚೂಪು ಶಂಕುವಿನಾಕಾರದ ಜನಸಂಖ್ಯಾ ಗೋಪುರ

ಅನಭಿವೃದ್ಧಿ ದೇಶಗಳಾದ ಆಫ್ರಿಕಾ ಮತ್ತು ಲ್ಯಾಟಿನ್ ಅಮೇರಿಕಾದ ದೇಶಗಳನ್ನು ಚಿತ್ರಿಸಿದಾಗ ಇಂಥ ಮಾದರಿಯಾ ಗೋಪುರ ಕಂಡು ಬರುವುದು.



ಇಂಥ ಗೋಪುರದಿಂದ ತಿಳಿದು ಬರುವ ಅಂಶಗಳು :

ಗೋಪುರದ ತಳಭಾಗ ವಿಶಾಲವಾಗಿದೆ ಇದು ಮಕ್ಕಳ ಮತ್ತು ಚಿಕ್ಕ ವಯಸ್ಸಿನ ಯುವಕ, ಯುವತಿಯರ ಪ್ರಮಾಣ ಹೆಚ್ಚು ಎಂಬುದನ್ನು ಸೂಚಿಸುತ್ತದೆ. ಈ ಪ್ರಮಾಣ ಕಡಿಮೆ ಆಗಿ ಅಧಿಕ ವಯಸ್ಸಿನವರನ್ನು ಸೂಚಿಸುವ ಭಾಗಗಳು ತುದಿಯಲ್ಲಿ ಚೂಪಾಗುತ್ತ ಹೋಗುವುದನ್ನು ಗಮನಿಸಿದಾಗ, ವೃದ್ಧರ ಪ್ರಮಾಣ ಕಡಿಮೆ ಎಂಬುದು ಸ್ಪಷ್ಟವಾಗುತ್ತದೆ ಇಂಥ ದೇಶದ ಜನಸಂಖ್ಯೆಯ ಮಧ್ಯ ವಯೋಮಾನ 16ಕಿಂತ ಕಡಿಮೆ ಇರುವುದು. ಜನರ ಆಯುರ್ಮಾನದಲ್ಲಿ ಬಹಳ ಕಡಿಮೆ ಇರುವುದು. ಇಂಥ ದೇಶದ ಜನಸಂಖ್ಯೆಯ ಜನನ ದರ ಹೆಚ್ಚು ಮತ್ತು ಮರಣ ದರವೂ ಹೆಚ್ಚು. 20ನೇ ಶತಮಾನದ ಆರಂಭದ ಎರಡು ಮೂರು ದಶಕಗಳಲ್ಲಿ ಭಾರತದ ಜನಸಂಖ್ಯಾ ಗೋಪುರವು ಇದೇ ಮಾದರಿಯಲ್ಲಿ ಇತ್ತು. ಈಗ ಯುಗಂಡಾ ನೈಜೀರಿಯಾ ಮೊದಲಾದ ದೇಶಗಳ ಜನಸಂಖ್ಯಾ ಗೋಪುರ ಈ ಮಾದರಿ ಯಲ್ಲಿ ಇದೆ.

2) ಶಂಕುವಿನಾಕಾರದ ಜನಸಂಖ್ಯಾ ಗೋಪುರ :



ಇಂಥ ಗೋಪುರದಿಂದ ತಿಳಿದು ಬರುವ ಅಂಶಗಳು :

ಗೋಪುರದ ಕೆಳಭಾಗವು ವಿಶಾಲವಾಗಿದ್ದು ಮೇಲೆ ಹೋದಂತೆ ಕ್ರಮೇಣ ಚಿಕ್ಕದಾಗುತ್ತ ಹೋಗುತ್ತದೆ. ಈ ಗೋಪುರವು ಕೂಡ ಜನಸಂಖ್ಯೆಯಲ್ಲಿ ಯುವಕ ಮತ್ತು ಯುವತಿಯರ ಪ್ರಮಾಣ ಹೆಚ್ಚು ಎಂಬುದನ್ನು ಸೂಚಿಸುತ್ತದೆ. ಇಂಥ ಜನಸಂಖ್ಯೆಯ ಮಧ್ಯ ವಯೋಮಾನ 16 ರಿಂದ 25ರ ಒಳಗೆ ಇರುವುದು. ಇಂಥ ದೇಶದ ಜನಸಂಖ್ಯೆಯ ಜನನ ದರ ಹೆಚ್ಚು ಮತ್ತು ಮರಣ ದರಗಳು ಕಡಿಮೆ ಇರುವುದು. ಅಂದರೆ ಜನನ ದರ ಮತ್ತು ಮರಣ ದರಗಳ ನಡುವಿನ ಅಂತರ ಬಹಳ ಇಂಥ ಜನಸಂಖ್ಯೆಯಲ್ಲಿ ಅವಲಂಬಿತರ ಪ್ರಮಾಣ ಹೆಚ್ಚಿಗೆ ಇರುವುದು. ಈಗ ಭಾರತದ ಜನಸಂಖ್ಯೆಯ ಜನಸಂಖ್ಯಾ ಗೋಪುರ ಇದೇ ಮಾದರಿಯನ್ನು ಹೋಲುವುದು. ಭಾರತದಂತೆ ಅಭಿವೃದ್ಧಿಶೀಲ ದೇಶಗಳಾದ ಪಾಕಿಸ್ತಾನ ಫಿಲಿಫೈನ್ಸ್, ಇಂಡೋನೇಶಿಯಾ ಮೊದಲಾದ ದೇಶಗಳ ಜನಸಂಖ್ಯಾ ಗೋಪುರವು ಇದೆ, ಮಾದರಿಯಲ್ಲಿ ಇದೆ ಎಂದು ಹೇಳಬಹುದು.

## 3) ಚೌಕಾಕಾರದ ಜನಸಂಖ್ಯಾ ಗೋಪುರ :



ಇಂಥ ಗೋಪುರಗಳಿಂದ ತಿಳಿದು ಬರುವ ಅಂಶಗಳು :

ಇಂಥ ಗೋಪುರಗಳ ತಳಭಾಗ ಕಡಿಮೇ ವಿಶಾಲವಾಗಿದೆ. ಮೇಲಕ್ಕೆ ಹೋದಂತೆ ಗೋಪುರ ಕಿರಿದಾಗುವ ಬದಲು ಒಂದೇ ತೆರನಾಗಿ ಇದೆ, ಗೋಪುರದ ಮಧ್ಯ ಭಾಗ ಹೆಚ್ಚು ಹರವಾಗಿದೆ. 60 ವಯಸ್ಸನ್ನು ದಾಟಿದ ಮೇಲೆ ಗೋಪುರ ಸ್ವಲ್ಪ ಸ್ವಲ್ಪವಾಗಿ ಕಿರಿದಾಗುತ್ತ ಹೋಗುತ್ತದೆ. ಇಂಥ ಜನಸಂಖ್ಯಾ ಗೋಪುರಗಳಲ್ಲಿ ವೃದ್ಧರ ಜನಸಂಖ್ಯೆಯು ಅಧಿಕವಾಗಿದ್ದು ಅವುಗಳನ್ನು ವೃದ್ಧ ಜನಸಂಖ್ಯೆ (Population of Aged Persons) ಹೊಂದಿರುವ ದೇಶಗಳೆಂದು ಕರೆಯ ಬಹುದು. ಇಂಥ ದೇಶಗಳಲ್ಲಿ ಮಕ್ಕಳ ಪ್ರಮಾಣ ಕಡಿಮೆ, ಜನನ ದರ ಕಡಿಮೆ ಮತ್ತು ಮರಣದರವೂ ಕಡಿಮೆ. ಜನನ ದರ ಮತ್ತು ಮರಣ ದರಗಳ ನಡುವಿನ ಅಂತರ ತೀರಾ ಕಡಿಮೆ. ಜನಸಂಖ್ಯಾ ಏರಿಕೆಯ ದರ ಶೇಕಡಾ 10ಕ್ಕಿಂತ ಕಡಿಮೆ ಇರುವುದು. ಇಂಗ್ಲಂಡ, ಫ್ರಾನ್ಸ, ಜರ್ಮನಿ, ಸ್ವೀಡನ್ ಮೊದಲಾದ ಅಭಿವೃದ್ಧಿ ಹೊಂದಿದ ರಾಷ್ಟ್ರಗಳ ಜನಸಂಖ್ಯಾ ಗೋಪುರವು ಈ ಮಾದರಿಯಲ್ಲಿ ಇರುವುದೆಂದು ಹೇಳ ಬಹುದು. ಇದು ಆದರ್ಶ ಜನಸಂಖ್ಯಾ ಗೋಪುರ ಎಂದು ಜನಸಂಖ್ಯಾ ಶಾಸ್ತ್ರಜ್ಞರ ಅಭಿಮತ.

4) ಕಿರೀಟಾಕಾರದ ಜನಸಂಖ್ಯಾ ಗೋಪುರ



ಇಂಥ ಜನಸಂಖ್ಯಾ ಗೋಪುರಗಳಿಂದ ತಿಳಿದು ಬರುವ ಅಂಶಗಳು: ಇಂಥ ಗೋಪುರಗಳ ತಳಭಾಗ ಕಿರಿದು, ನಡುಭಾಗ ಅಗಲವಾಗಿದ್ದು ಮೇಲಕ್ಕೆ ಹೋದಂತೆ 40 ವರ್ಷ ವಯಸ್ಸಿನ ನಂತರ ಕಿರಿದಾಗುತ್ತ ಹೋಗುವುದು. ಇಂಥ ಜನಸಂಖ್ಯೆಯಲ್ಲಿ ಚಿಕ್ಕ ಮಕ್ಕಳ ಪ್ರಮಾಣ ಕಡಿಮೆ 15ರಿಂದ 45 ವರ್ಷವಯಸ್ಸಿನ ಜನಸಂಖ್ಯೆ ಹೆಚ್ಚು. ಇಂಥ ಜನಸಂಖ್ಯೆಗೆ ಉತ್ಪಾದಕರ ಜನಸಂಖ್ಯೆ (Productive Population) ಎಂದು ಅನ್ನಬಹುದು. ತಳಭಾಗ ಕಿರಿದಾಗಿರಲು ಕಾರಣ ತೀವ್ರ ಜನನ ದರ ಇಳಿಕೆ. ಇದು ಇಂದಿನ ಚೀನಾ ದೇಶದಲ್ಲಿ ಕಟ್ಟುನಿಟ್ಟಿನ ಜನನ ನಿಯಂತ್ರಣದ ಪರಿಣಾಮವಾಗಿ ಜನನ ದರ ಒಮ್ಮಿಗೆ ತೀವ್ರ ಇಳಿದಿದೆ. ಕಡ್ಡಾಯವಾಗಿ ಒಂದು ಮಗು ಕುಟುಂಬವನ್ನು ಜಾರಿಗೆ ತಂದಿರುವುದರಿಂದ ಈ ಮಾದರಿಯ ತಾತ್ಕಾಲಿಕವಾದ ಜನಸಂಖ್ಯಾ ಗೋಪುರ ನಿರ್ಮಾಣವಾಗಿದೆ.

**ಅವಲಂಬನ** ಪ್ರಮಾಣ : (Dependency Ratio) ಒಂದು ಪ್ರದೇಶದ ಜನಸಂಖ್ಯೆಯಲ್ಲಿ ಬೇರೆ ಬೇರ ವಯಸ್ಸಿನವರು ಇರುತ್ತಾರೆ. ಅವರಲ್ಲಿ ಸಾಮಾನ್ಯವಾಗಿ 15ವರ್ಷಕ್ಕಿಂತ ಕಡಿಮೆ ವಯಸ್ಸಿನವರನ್ನು ಕಿರಿಯ ಅವಲಂಬಿತರು (Young dependents) ಎಂದು ತಿಳಿಯುತ್ತಾರೆ. ಯಾಕೆಂದರೆ, 15ವರ್ಷ ವಯಸ್ಸಿನಒಳಗಿನ ಮಕ್ಕಳು ತಮ್ಮ ಮೂಲ ಭೂತ ಅಗತ್ಯಗಳಾದ ಆಹಾರ, ಬಟ್ಟೆ, ವಸತಿ, ಶಿಕ್ಷಣ ಮತ್ತು ಆರೋಗ್ಯದ ಬಗ್ಗೆ ದುಡಿಯುವ ವಯಸ್ಕರನ್ನು ಅವಲಂಬಿಸಿರಬೇಕಾಗುತ್ತದೆ. ಈ ಚಿಕ್ಕಮಕ್ಕಳು ದುಡಿಮೆಗೆ ಅರ್ಹರೂ ಅಲ್ಲ. ಯಾಕೆಂದರೆ ಇವರಿಗೆ ದುಡಿಮೆಗೆ ಅವಶ್ಯವಾಗಿ ಬೇಕಾಗುವ ಮಾನಸಿಕ ಸಾಮರ್ಥ್ಯ ಮತ್ತು ಶಾರೀರಿಕ ಧಾರ್ಢ್ಯ ಇರುವುದಿಲ್ಲ. 15ರಿಂದ 59 ವಯಸ್ಸಿನ ನಡುವಿನ ವಯೋಮಾನದ ಗುಂಪಿನ ಜನರನ್ನು ದುಡಿಮೆಗಾರರು (Productive Workers) ಅಥವಾ ಸ್ವಾವಲಂಭಿಗಳು ಎಂದು ಪರಿಗಣಿಸಲಾಗುವುದು.

ಒಂದು ಪ್ರದೇಶದ ಜನಸಂಖ್ಯೆಯಲ್ಲಿ ಪ್ರತಿ ನೂರು ಜನ ದುಡಿಮೆಗಾರರಿಗೆ ಎಷ್ಟು ಚಿಕ್ಕಮಕ್ಕಳ ಸಂಖ್ಯೆ (15 ವಯಸ್ಸಿಗಿಂತ ಚಿಕ್ಕವರು) ಇರುವರೋ, ಆ ಸಂಖ್ಯೆಗೆ ಚಿಕ್ಕ ಮಕ್ಕಳ ಅವಲಂಬನ ಪ್ರಮಾಣ (Child dependency Ratio) ಎಂದು ಅನ್ನುವರು. ಚಿಕ್ಕಮಕ್ಕಳ ಅವಲಂಬಿತ ಪ್ರಮಾಣವನ್ನು ಈ ಕೆಳಗಿನ ಸೂತ್ರದಿಂದ ಕಂಡು ಹಿಡಿಯಬಹುದು,

$$\text{ಕಿರಿಯ ಅವಲಂಬಿಗಳ ಪ್ರಮಾಣ} = \frac{\text{ಜ}—15}{\text{ಜ}—(15—59)} \times 100$$

ಜ—15. ಎಂದರೆ 15 ವರ್ಷ ವಯಸ್ಸಿಗಿಂತ ಕಡಿಮೆ ವಯಸ್ಸಿನ ಜನಸಂಖ್ಯೆ
ಜ(15—59 ಎಂದರೆ 15 ವರ್ಷದಿಂದ 59 ವರ್ಷ ವಯಸ್ಸಿನ ಅಂತರದ ಜನಸಂಖ್ಯೆ.

ಭಾರತದಲ್ಲಿ ಕಿರಿಯರ ಅವಲಂಬನ ಪ್ರಮಾಣ ಸುಮಾರು 84 ಇದೆ, (ಕ್ರಿ ಶ. 1984ರ ಅಂದಾಜಿನಂತೆ) ಅಂದರೆ ಭಾರತದಲ್ಲಿ ಪ್ರತಿ 100 ಮಂದಿ ದುಡಿಮೆಗಾರರಿಗೆ 84 ಮಂದಿ ದುಡಿಯಲಾರದ 15 ವರ್ಷ ಒಳಗಿನ ಕಿರಿಯ ಅವಲಂಬಿತರು ಇದ್ದಾರೆ. ನಮ್ಮ ಭಾರತದ ಜನಸಂಖ್ಯೆಯ ಕಿರಿಯರ ಅವಲಂಬನ ಪ್ರಮಾಣವನ್ನು ಇತರ ಮುಂದುವರಿದ ದೇಶಗಳಿಗೆ ಹೋಲಿಸಿದರೆ ಅದು ನಮ್ಮ ದೇಶದಲ್ಲಿ ತುಂಬಾ ಹೆಚ್ಚು, ಯಾವ ದೇಶದಲ್ಲಿ ಜನನ ದರ ಮತ್ತು ಮರಣ ದರ ಕಡಿಮೆ ಇದ್ದು ಅವುಗಳ ನಡುವಿನ ಅಂತರ ಕಡಿಮೆ ಇದೆಯೋ ಅಂಥ ದೇಶದಲ್ಲಿ ಚಿಕ್ಕಮಕ್ಕಳ ಅವಲಂಬನ ಪ್ರಮಾಣ ಕಡಿಮೆ ಇರುವುದು.

ಯಾವ ದೇಶದಲ್ಲಿ ಜನನ ದರ ಹೆಚ್ಚು, ಮರಣ ದರ ಕಡಿಮೆ ಇದ್ದು, ಅವುಗಳ ನಡುವಿನ ಅಂತರ ಹೆಚ್ಚು ಇದೆಯೋ ಅಂಥ ದೇಶದಲ್ಲಿ ಕಿರಿಯರ ಅವಲಂಬನ ಪ್ರಮಾಣ ಹೆಚ್ಚಿಗೆ ಇರುವುದು. ಕಿರಿಯರ ಅವಲಂಬನ ಪ್ರಮಾಣ ಹೆಚ್ಚಿಗೆ ಇರುವುದರಿಂದ ದೇಶದ ಮೇಲೆ ಎರಡು ಗಂಭೀರ ಪರಿಣಾಮಗಳು ಉಂಟಾಗುತ್ತವೆ.

1) ಹೆಚ್ಚಿನ ಉತ್ಪನ್ನಗಳು ಅವಲಂಬಿತರ ಮೂಲಭೂತವಾದ ಆಹಾರ, ಬಟ್ಟೆ, ವಸತಿ, ಆರೋಗ್ಯ ಮುಂತಾದವುಗಳಿಗೆ ಖರ್ಚು ಆಗಿ ಉಳಿತಾಯ ಕಡಿಮೆ ಆಗುವುದು. ಇದರಿಂದ ಬಂಡವಾಳ ಕಡಿಮೆ ಆಗಿ ಆರ್ಥಿಕ ಪ್ರಗತಿ ಕುಂಠಿತ ವಾಗುವುದು.

2) ಭವಿಷ್ಯತ್ತಿನಲ್ಲಿ ಹೆಚ್ಚು ಪಾಲಕರು ಮತ್ತು ಹೆಚ್ಚು ಜನನಗಳಿಗೆ ಎಡೆ ಮಾಡಿ ಕೊಡುವುದು.

ವೃದ್ಧರ ಅವಲಂಬನ ಪ್ರಮಾಣ : (Old-Persons dependency Ratio) 59 ವರ್ಷ ವಯಸ್ಸನ್ನು ದಾಟಿದ ಜನರನ್ನು ಕೂಡ ದುಡಿಯಲಾರದ ಅವಲಂಬಿತರು ಎಂದು ಪರಿಗಣಿಸಲಾಗುವುದು. ಯಾಕೆಂದರೆ, ಇಂಥ ವೃದ್ಧರೂ ಕೂಡ ತಮ್ಮ ಮೂಲಭೂತ ಅಗತ್ಯಗಳ ಪೂರೈಕೆಗಾಗಿ ದುಡಿಯುವ ವಯಸ್ಕರನ್ನು ಅವಲಂಬಿಸಬೇಕಾಗುತ್ತದೆ. ಈ ವೃದ್ಧರು ದುಡಿಮೆಗೆ ಅರ್ಹರೂ ಅಲ್ಲ. ಯಾಕೆಂದರೆ ಇವರು ವೃದ್ಧರು ಹೆಚ್ಚಿನ ವಯಸ್ಸಿನವರಾಗಿ ಆರ್ಥಿಕ ದುಡಿಮೆಗೆ ಬೇಕಾಗುವ ಶಾರೀರಿಕ ಧಾರ್ಢ್ಯ ಮತ್ತು ಮಾನಸಿಕ ಚೈತನ್ಯವನ್ನು ಕಳೆದುಕೊಂಡವರಾಗಿರುತ್ತಾರೆ. ಅವರಿಂದ ದುಡಿಮೆಯನ್ನು ಅಪೇಕ್ಷಿಸುವುದು ಹಿತಕರವಲ್ಲ

ಒಂದು ಪ್ರದೇಶದ ಜನಸಂಖ್ಯೆಯಲ್ಲಿ ಪ್ರತಿ ನೂರು ದುಡುಮೆಗಾರರಿಗೆ ಇರುವ ವೃದ್ಧರ ಒಟ್ಟೂ ಜನಸಂಖ್ಯೆಗೆ ವೃದ್ಧರ ಅವಲಂಬನ ಪ್ರಮಾಣ ಎನ್ನವರು. ವೃದ್ಧರ ಅವಲಂಬನ ಪ್ರಮಾಣವನ್ನು ಈ ಕೆಳಗಿನ ಸೂತ್ರದ ಸಹಾಯದಿಂದ ಕಂಡುಕೊಳ್ಳ ಬಹುದು.

$$\text{ವೃದ್ಧರ ಅವಲಂಬನ ಪ್ರಮಾಣ} \quad \frac{\text{ಜ.}59}{\text{ಜ}(15-59)} \times 100$$

ಜ. 59—ಅಂದರೆ 59 ವರ್ಷ ದಾಟಿದ ವೃದ್ಧರ ಒಟ್ಟೂ ಜನಸಂಖ್ಯೆ

ಜ.(15 – 59) ಅಂದರೆ 15 ರಿಂದ 59 ವರ್ಷ ಒಳಗಿನ ದುಡಿಮೆಗಾರರ ಒಟ್ಟೂ ಜನಸಂಖ್ಯೆ.

ಕ್ರಿ. ಶ. 1984ರ ಅಂದಾಜಿನ ಪ್ರಕಾರ ವೃದ್ಧರ ಅವಲಂಬನ ಪ್ರಮಾಣ ಭಾರತದಲ್ಲಿ ಸುಮಾರು 10 ಅಂದರೆ ಪ್ರತಿ 100 ದುಡಿಮೆಗಾರರಿಗೆ 10 ವೃದ್ಧರ ಅವಲಂಬಿತರಿದ್ದಾರೆ. ಇತರ ಮುಂದುವರಿದ ದೇಶಗಳಿಗೆ ಹೋಲಿಸಿದರೆ ನಮ್ಮ ದೇಶದಲ್ಲಿ ವೃದ್ಧರ ಅವಲಂಬನ ಪ್ರಮಾಣ ತೀರಾ ಕಡಿಮೆ.

ಯಾವ ದೇಶದಲ್ಲಿ ಜನನ ದರ ಹೆಚ್ಚು ಮತ್ತು ಮರಣ ದರ ಹೆಚ್ಚು ಇದೆಯೋ ಅಂಥ ದೇಶದಲ್ಲಿ ವೃದ್ಧರ ಅವಲಂಬನ ಪ್ರಮಾಣ ಕಡಿಮೆ ಇರುವುದು. ಯಾವ ದೇಶದಲ್ಲಿ ಜನನ ದರ ಕಡಿಮೆ ಮತ್ತು ಮರಣ ದರ ಕಡಿಮೆ ಇರುವುದೋ ಅಂಥಲ್ಲಿ ವೃದ್ಧರ ಅವಲಂಬನ ಪ್ರಮಾಣ ಹೆಚ್ಚು ಇರುವುದು.

**ಒಟ್ಟು ಅವಲಂಬನ ಪ್ರಮಾಣ :** (Total Dependency Ratio) ಕಿರಿಯರ ಅವಲಂಬನ ಪ್ರಮಾಣ ಮತ್ತು ವೃದ್ಧರ ಅವಲಂಬನ ಪ್ರಮಾಣ ಇವೆರಡರ ಮೊತ್ತವೇ ಆ ದೇಶದ ಜನ ಸಂಖ್ಯೆಯ ಒಟ್ಟೂ ಅವಲಂಬನ ಪ್ರಮಾಣವನ್ನು ಸೂಚಿಸು ತ್ತದೆ. ಒಟ್ಟೂ ಅವಲಂಬನ ಪ್ರಮಾಣವನ್ನು ಈ ಕೆಳಗಿನ ಸೂತ್ರವನ್ನು ಉಪಯೋಗಿಸಿ ಕಂಡು ಹಿಡಿಯಬಹುದು.

$$\text{ಒಟ್ಟೂ ಅವಲಂಬನ ಪ್ರಮಾಣ:} = \frac{(\text{ಜ}-15)+(\text{ಜ}-60)}{\text{ಜ}(15-59)} \times 100$$

| | |
|---|---|
| ಜ—15 ಅಂದರೆ | 15 ವರ್ಷ ವಯಸ್ಸಿನ ಒಳಗಿನ ಒಟ್ಟೂ ಕಿರಿಯರ ಸಂಖ್ಯೆ |
| ಜ—60 ಅಂದರೆ | 60 ವರ್ಷ ದಾಟಿದ ಒಟ್ಟೂ ವೃದ್ಧರ ಸಂಖ್ಯೆ |
| ಜ(15—59)ಅಂದರೆ | 15 ರಿಂದ 59 ವರ್ಷ ವಯಸ್ಸಿನ ದುಡಿಮೆಗಾರರ ಒಟ್ಟೂ ಜನಸಂಖ್ಯೆ. |

ಕ್ರಿ.ಶ. 1984ರ ಅಂದಾಜಿನ ಪ್ರಕಾರ ಭಾರತದಲ್ಲಿ ಒಟ್ಟು ಅವಲಂಬನ ಪ್ರಮಾಣ 94 ಇದೆ. ಅಂದರೆ ಪ್ರತಿ ನೂರು ದುಡಿಮೆಗಾರರಿಗೆ ಒಟ್ಟು 94 ಮಂದಿ ಅವಲಂಬಿತರಿದ್ದಾರೆ. ಮುಂದುವರಿದ ಎಲ್ಲಾ ರಾಷ್ಟ್ರಗಳಿಗೆ ಹೋಲಿಸಿದರೆ ಒಟ್ಟೂ ಅವಲಂಬಿತರ ಪ್ರಮಾಣ ಭಾರತದಲ್ಲಿ ಅತೀ ಹೆಚ್ಚು. ಅತೀ ಹೆಚ್ಚು ಅವಲಂಬನ ಪ್ರಮಾಣವು ದೇಶದ ಆರ್ಥಿಕ ಬೆಳವಣಿಗೆಯ ಮೇಲೆ ಕೆಟ್ಟ ಪರಿಣಾಮ ಬೀರುವುದು.

**ಜೀವನಾವಧಿ :**

ನವಜಾತ(ಸಜೀವವಾಗಿ ಹುಟ್ಟಿದ) ಶಿಶು ಸರಾಸರಿ ಎಷ್ಟು ವರ್ಷ ಬದುಕಿ ಇರಬಲ್ಲದು ಎಂಬ ನಿರೀಕ್ಷೆಯೇ ಜನಸಂಖ್ಯೆಯ ಜೀವನಾವಧಿ. ಅಥವಾ ಆಯುಷ್ಯ ನಿರೀಕ್ಷೆ ಎಂದು ಅನ್ನುವರು. ಒಂದು ದೇಶದ ಜನಸಂಖ್ಯೆಯ ಆಯುಷ್ಯ ನಿರೀಕ್ಷೆಯು ಆ ದೇಶದ ಜನರು ಸರಾಸರಿ ಎಷ್ಟು ವರ್ಷಗಳ ವರೆಗೆ ಬದುಕುವರು ಎಂಬುದನ್ನು ಸೂಚಿಸುತ್ತದೆ. ಭಾರತದಲ್ಲಿ 1981ರ ಜನಗಣತಿಯ ಪ್ರಕಾರ ಜನರ ಸರಾಸರಿ ಜೀವನಾವಧಿ 53 ವರ್ಷ. ಅಂದರೆ ಭಾರತದಲ್ಲಿ ಹುಟ್ಟಿದ ಮಗು ಸರಾಸರಿ 53 ವರ್ಷದವರೆಗೆ ಬದುಕಬಲ್ಲದು ಎಂದು ಅರ್ಥ. ಈ ಇಪ್ಪತ್ತನೇ ಶತಮಾನದ ಆರಂಭದಲ್ಲಿ ಭಾರತೀಯರ ಸರಾಸರಿ ಜೀವನಾವಧಿ 22 ವರ್ಷ ಇತ್ತು. ಜೀವನಾವಧಿಯು ಒಂದು ದೇಶದ ಮರಣ ದರ, ಪ್ರಗತಿ, ಸುಧಾರಿತ ಆರೋಗ್ಯ ಕಾರ್ಯಕ್ರಮ, ಜೀವನಮಟ್ಟ ಮುಂತಾದವುಗಳನ್ನು ಅವಲಂಬಿಸಿರುತ್ತದೆ.

**ಸಾಕ್ಷರತೆ :**

ಸಾಕ್ಷರತೆಯ ಅರ್ಥವು ಸ್ಥಳದಿಂದ ಸ್ಥಳಕ್ಕೆ ವ್ಯತ್ಯಾಸ ಹೊಂದುತ್ತದೆ. ಕೆಲವು ದೇಶಗಳಲ್ಲಿ ಓದು ಬರಹ ಬರುವವರನ್ನೆಲ್ಲ ಸಾಕ್ಷರರು ಎಂದು ಪರಿಗಣಿಸಲಾಗುವುದು. ಭಾರತ

ದಲ್ಲಿ ತಮ್ಮ ಹೆಸರನ್ನೂ ಬರೆಯಲು ಬರುವವರೆಲ್ಲರನ್ನು ಸಾಕ್ಷರರು ಎಂದು ಪರಿಗಣಿಸಲಾಗಿದೆ. ಅನೇಕ ದೇಶಗಳಲ್ಲಿ ಓದು ಬರುವವರು ಮತ್ತು ಅರ್ಥ ಮಾಡಿಕೊಳ್ಳುವ ಶಕ್ತಿ ಇರುವವರನ್ನು ಸಾಕ್ಷರರೆಂದು ಕರೆಯಲಾಗಿದೆ. ವಿಶ್ವಸಂಸ್ಥೆಯು ಸಾಕ್ಷರತೆ ಅಂದರೆ "ವ್ಯಕ್ತಿಯು ತನ್ನ ದೈನಂದಿನ ಜೀವನದಲ್ಲಿ ಕೇಳುವ ಸರಳ ಹೇಳಿಕೆಗಳನ್ನು ಅರ್ಥ ಮಾಡಿಕೊಳ್ಳುವ, ಓದುವ ಮತ್ತು ಬರೆಯುವ ಸಾಮರ್ಥ್ಯ ಹೊಂದಿರುವದಾಗಿದೆ". ಎಂದು ವ್ಯಾಖ್ಯೆ ನೀಡಿದೆ. ಒಂದು ದೇಶದ ಜನಸಂಖ್ಯೆಯ ಸಾಕ್ಷರತೆಯ ಪ್ರಮಾಣವನ್ನು ಈ ಕೆಳಗಿನ ಸೂತ್ರವನ್ನು ಉಪಯೋಗಿಸಿ ಕಂಡು ಹಿಡಿಯಬಹುದು.

$$\text{ಸಾಕ್ಷರತೆ ಪ್ರಮಾಣ} = \frac{\text{ಅ}}{\text{ಜ}} \times 100$$

ಅ — ಅಂದರೆ ಸಾಕ್ಷರರ ಒಟ್ಟೂ ಸಂಖ್ಯೆ

ಜ — ಅಂದರೆ ಆ ದೇಶದ ಒಟ್ಟೂ ಜನಸಂಖ್ಯೆ.

ಕ್ರಿ. ಶ. 1981ರ ಜನಗಣತಿಯ ಪ್ರಕಾರ, ಭಾರತದ ಜನಸಂಖ್ಯೆಯ ಸಾಕ್ಷರತೆಯ ಪ್ರಮಾಣ 36.1 ಇದೆ ಅಂದರೆ ಪ್ರತಿ ನೂರು ಜನಸಂಖ್ಯೆಯಲ್ಲಿ 36.1 ಜನರು ಸಾಕ್ಷರರು ಎಂದು ಅರ್ಥ.

ಈ ಮೇಲಿನ ಸೂತ್ರವನ್ನು ಬಳಸಿ ಸ್ತ್ರೀಯರಲ್ಲಿ ಮತ್ತು ಪುರುಷರಲ್ಲಿ, ಗ್ರಾಮೀಣ, ನಗರ ಮತ್ತು ವಿವಿಧ ಪ್ರದೇಶಗಳ ಸಾಕ್ಷರತೆ ಪ್ರಮಾಣವನ್ನು ಕಂಡು ಹಿಡಿಯಬಹುದು.

**ವೃತ್ತಿಯ ರಚನೆ :— (Occupation Composition)** ವೃತ್ತಿಯ ಮೇರೆಗೆ ಜನರನ್ನು, ಕೆಲಸಗಾರರು ಮತ್ತು ಕೆಲಸವಿಲ್ಲದವರು ಎಂದು ಎರಡು ಗುಂಪುಗಳಾಗಿ ವಿಂಗಡಿಸಲಾಗಿದೆ. ವಸ್ತು ಉತ್ಪಾದನೆ ಮತ್ತು ಸೇವೆಯಲ್ಲಿ ನಿರತರಾಗಿರುವರನ್ನು ಮಾತ್ರ ಕೆಲಸಗಾರರೆಂದು ಕರೆಯಬಹುದು. ಕೆಲಸಗಾರನಾರೆಂಬುದರ ಬಗ್ಗೆ ನಿಖರವಾದ ಅರ್ಥವನ್ನು ಕೊಡುವುದು ಕಷ್ಟ ಸಾಧ್ಯ. ಸಂಪಾದಿಸುವವರೆಲ್ಲರೂ ಕೆಲಸಗಾರರಲ್ಲ. ಸ್ವತಃ ದುಡಿದು ಸಂಪಾದಿಸುವವರನ್ನು ಮಾತ್ರ ಕೆಲಸಗಾರರೆಂದು ಕರೆಯುವುದು ಹೆಚ್ಚು ಸೂಕ್ತ. ಉದಾಹರಣೆಗೆ ಬಾಡಿಗೆ ಪಡೆದು ಜೀವಿಸುವವರು, ಅಡಿಗೆ ಮಾಡುವ ಮಹಿಳೆಯರು, ಶಾಲೆಯಲ್ಲಿ ಓದುತ್ತಿದ್ದು ತಂದೆ ತಾಯಿಗೆ ಕೆಲಸದಲ್ಲಿ ಸಹಾಯಕರಾಗಿರುವ ವಿದ್ಯಾರ್ಥಿಗಳು ಮುಂತಾದವರನ್ನು ಕೆಲಸಗಾರರೆಂದು ಪರಿಗಣಿಸಲಾಗದು. 1981 ಜನಗಣತಿಯ ಪ್ರಕಾರ ಆರ್ಥಿಕ

ಉತ್ಪಾದನೆಗೋಸ್ಕರ ದೈಹಿಕ ಅಥವಾ ಮಾನಸಿಕ ಶ್ರಮವನ್ನು ವಿನಿಯೋಗಿಸುವವರನ್ನು ಕೆಲಸಗಾರರೆಂದು ಕರೆಯಲಾಗುವುದು. ಕೆಲಸ ಅಂದರೆ ದೈಹಿಕ ಅಥವಾ ಮಾನಸಿಕ ಶ್ರಮ ವಿನಿಯೋಗ ಮಾತ್ರವಲ್ಲದೆ ಮೇಲ್ವಿಚಾರಣೆ ಮತ್ತು ಮಾರ್ಗದರ್ಶನವನ್ನು ಒಳಗೊಂಡಿದೆ. ಒಂದು ದೇಶದ ಜನಸಂಖ್ಯೆಯಲ್ಲಿ ವೃತ್ತಿನಿರತರ ಪ್ರಮಾಣವನ್ನು ಈ ಕೆಳಗಿನ ಸೂತ್ರವನ್ನು ಉಪಯೋಗಿಸಿ ಕಂಡುಹಿಡಿಯಬಹುದು.

$$\text{ವೃತ್ತಿ ನಿರತರ ಪ್ರಮಾಣ} := \frac{\text{ಕೆಲಸಗಾರರ ಒಟ್ಟು ಸಂಖ್ಯೆ}}{\text{ದೇಶದ ಒಟ್ಟು ಜನಸಂಖ್ಯೆ}} \times 100$$

ಕ್ರಿ.ಶ. 1981ರ ಜನಗಣತಿಯ ಪ್ರಕಾರ, ಭಾರತದಲ್ಲಿ ವೃತ್ತಿನಿರತರ ಪ್ರಮಾಣ 33.4 ಅಂದರೆ ಭಾರತದಲ್ಲಿ ಪ್ರತಿ ನೂರು ಜನಸಂಖ್ಯೆಗೆ 33.4 ಜನರು ವೃತ್ತಿನಿರತರಾಗಿದ್ದರು ಎಂದು ಅರ್ಥ. ಇತರ ಮುಂದುವರಿದ ದೇಶಗಳಿಗೆ ಹೋಲಿಸಿದರೆ ಭಾರತದಲ್ಲಿ ವೃತ್ತಿನಿರತರ ಪ್ರಮಾಣ ಬಹಳ ಕಡಿಮೆ ಇದೆ.

ಜನಸಂಖ್ಯೆಗೆ ಸಂಬಂಧಪಟ್ಟ ಈ ಎಲ್ಲ ಪರಿಕಲ್ಪನೆಗಳನ್ನು ಸರಿಯಾಗಿ ಅರ್ಥ ಮಾಡಿಕೊಂಡಾಗ, ಜನಸಂಖ್ಯೆ ಶಿಕ್ಷಣಶಾಸ್ತ್ರದ ಎಲ್ಲಾ ವಿಷಯಗಳ ಅಂಕಿ ಅಂಶಗಳನ್ನು ತಿಳಿದುಕೊಳ್ಳುವುದು ಸುಲಭಸಾಧ್ಯವಾಗುವುದು. ಮತ್ತು ನಮ್ಮ ದೇಶದ ಜನಸಂಖ್ಯೆಗೆ ಸಂಬಂಧಪಟ್ಟ ಅಂಕಿ ಅಂಶಗಳನ್ನು ಇತರ ದೇಶಗಳ ಅಂಕಿ ಅಂಶಗಳಿಗೆ ಹೋಲಿಸಿ ಅರ್ಥೈಸಲು ಅನುಕೂಲವಾಗುತ್ತದೆ.

+ +

## ಆಧಾರ ಗ್ರಂಥಗಳು

1) Population Situation in India
By Dr. C. Chandrashekhar

2) ಜನಸಂಖ್ಯೆ ಅಧ್ಯಯನ ಮೂಲ ತತ್ವಗಳು
ಪ್ರೊ : ಆರ್. ಆರ್. ಕೃಷ್ಣ.

3) 1981ರ ಜನಗಣತಿ ವರದಿ. ಭಾರತ ಸರಕಾರದ ಪ್ರಕಟಣೆ.

4) ಜನಸಂಖ್ಯಾ ಅಧ್ಯಯನ — ಶ್ರೀ ಎ. ನಾರಾಯಣಪ್ಪ.

## 'ನಮಗಾಗಿ ಜನಸಂಖ್ಯಾ ಶಿಕ್ಷಣ'
## ಮಾಲಿಕೆಯಲ್ಲಿನ ಪುಸ್ತಿಕೆಗಳು

1) ಜನಸಂಖ್ಯಾ ಶಾಸ್ತ್ರದ ಪರಿಕಲ್ಪನೆಗಳು.
2) ಭಾರತದಲ್ಲಿ ಜನಸಂಖ್ಯಾ ಸ್ಫೋಟ.
3) ಇಂದಿನ ಜನಸಂಖ್ಯಾ ಸ್ಥಿತಿ—ಒಂದು ವಿವೇಚನೆ.
4) ಭಾರತದಲ್ಲಿ ಜನಸಂಖ್ಯಾ ಬೆಳವಣಿಗೆಗೆ ಕಾರಣಗಳು.
5) ಜನಸಂಖ್ಯಾ ಬೆಳವಣಿಗೆ ಮತ್ತು ಸಾಮಾಜಿಕ ಪರಿಸರ.
6) ಜನಸಂಖ್ಯೆ ಹಾಗೂ ಆರೋಗ್ಯ.
7) ಕುಟುಂಬದ ಗಾತ್ರ ಹಾಗೂ ಕೌಟುಂಬಿಕ ಜೀವನ.
8) ಜನಸಂಖ್ಯೆಯ ಬೆಳವಣಿಗೆ ಹಾಗೂ ಸಾಮಾಜಿಕ ಜೀವನ.
9) ಜನಸಂಖ್ಯಾ ಬೆಳವಣಿಗೆ ಹಾಗೂ ನೈಸರ್ಗಿಕ ಸಂಪನ್ಮೂಲಗಳು.
10) ಭಾರತೀಯ ಸಂಪ್ರದಾಯಗಳು ಹಾಗೂ ಚಿಕ್ಕ ಕುಟುಂಬ.
11) ಚಿಕ್ಕ ಕುಟುಂಬ ಅಭಿವೃದ್ಧಿಗೆ ಪೂರಕ.
12) ಜನಸಂಖ್ಯಾ ಸಮಸ್ಯೆಗೆ ಸಾಮಾಜಿಕ ಪರಿಹಾರ.
13) ಜನಸಂಖ್ಯಾ ನಿಯಂತ್ರಣ ಹಾಗೂ ಶಿಕ್ಷಣ.
14) ಜನಸಂಖ್ಯಾ ಶಿಕ್ಷಣ ಹಾಗೂ ಕ್ಷೇತ್ರ ಕಾರ್ಯಕರ್ತರು.
15) ಲೈಂಗಿಕ ಶಿಕ್ಷಣ.
16) ಭಾರತದಲ್ಲಿ ಜನಸಂಖ್ಯಾ ನಿಯಂತ್ರಣ ಕಾರ್ಯಕ್ರಮಗಳು.
17) ಕುಟುಂಬ ಕಲ್ಯಾಣ ಸೇವೆಗಳು.
18) ಜನಸಂಖ್ಯೆ ಹಾಗೂ ಜ್ಯೋತಿಶ್ಶಾಸ್ತ್ರ.
19) ಜನಸಂಖ್ಯಾ ಶಿಕ್ಷಣ ಅರ್ಥ ಮತ್ತು ವ್ಯಾಪ್ತಿ.